# ಶಾಂತವೇರಿ ಗೋಪಾಲಗೌಡರ ಸಮಾಜವಾದಿ
# ತತ್ವ-ನಿಷ್ಠೆ

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್.) ಪದವಿಯ ಆಂಶಿಕ
ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ

ಸಂಶೋಧನಾ ಅಭ್ಯರ್ಥಿ
**ಉಮೇಶ ಎಸ್.ಟಿ.**

ಮಾರ್ಗದರ್ಶಕರು
**ಡಾ. ಜೆ.ಕೆ.ರಮೇಶ್**



ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ.
2008

# ಶಾಂತವೇರಿ ಗೋಪಾಲಗೌಡರ ಸಮಾಜವಾದಿ ತತ್ವ -ನಿಷ್ಠೆ

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್.) ಪದವಿಯ ಆಂಶಿಕ
ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ

ಸಂಶೋಧನಾ ಅಭ್ಯರ್ಥಿ

ಉಮೇಶ ಎಸ್.ಟಿ.

ಮಾರ್ಗದರ್ಶಕರು

ಡಾ. ಜೆ.ಕೆ.ರಮೇಶ್





ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ
2008

# ದೃಢೀಕರಣ ಪತ್ರ

ಶ್ರೀ ಉಮೇಶ ಎಸ್.ಟಿ. ಇವರು ''ಶ್ರೀ ಶಾಂತವೇರಿ ಗೋಪಾಲಗೌಡರ ಸಮಾಜವಾದಿ ತತ್ವ -ನಿಷ್ಠೆ'' ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಭಾಷೆ ಮತ್ತು ಸಾಹಿತ್ಯ ನಿಕಾಯಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಈ ಸಂಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.

ದಿನಾಂಕ : ೨-೧೦-೨೦೦೮

ಸ್ಥಳ : ವಿದ್ಯಾರಣ್ಯ

(ಡಾ. ಜೆ.ಕೆ. ರಮೇಶ್)
ನಿವೃತ್ತ ಪ್ರಾಧ್ಯಾಪಕರು,
ತುಂಗಾ ಮಹಾವಿದ್ಯಾಲಯ,
ತೀರ್ಥಹಳ್ಳಿ

# ಪ್ರಮಾಣ ಪತ್ರ

"ಶ್ರೀ ಶಾಂತವೇರಿ ಗೋಪಾಲಗೌಡರ ಸಮಾಜವಾದಿ ತತ್ವ -ನಿಷ್ಠೆ" ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯದ ಭಾಷೆ ಮತ್ತು ಸಾಹಿತ್ಯ ನಿಕಾಯಕ್ಕೆ ಸಲ್ಲಿಸಲು ಡಾ|| ಜೆ.ಕೆ. ರಮೇಶ್ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲೀ ಅಥವಾ ಇತರೆ ಉದ್ದೇಶಗಳಿಗಾಗಲಿ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಾಮಾಣೀಕರಿಸುತ್ತೇನೆ.

ದಿನಾಂಕ : 3-10-2008

Umesh

(ಉಮೇಶ ಎಸ್.ಟಿ.)
ರಾಜ್ಯಶಾಸ್ತ್ರ ಉಪನ್ಯಾಸಕರು,
ತುಂಗಾ ಮಹಾವಿದ್ಯಾಲಯ,
ತೀರ್ಥಹಳ್ಳಿ

# ಶಾಂತವೇರಿ ಗೋಪಾಲಗೌಡರ ಸಮಾಜವಾದಿ ತತ್ವ -ನಿಷ್ಠೆ



## ಪರಿವಿಡಿ

# ಪೀಠಿಕೆ

ಕರ್ನಾಟಕ ಕಂಡ ಮಹಾನ್ ಸಮಾಜವಾದಿ ಚಿಂತಕರು ಮತ್ತು ಹೋರಾಟಗಾರರಲ್ಲಿ ಶ್ರೀಯುತ ಶಾಂತವೇರಿ ಗೋಪಾಲಗೌಡರು ಮುಖ್ಯರಾದವರಾಗಿದ್ದಾರೆ. ಗೋಪಾಲಗೌಡರ ಸಮಾಜವಾದಿ ಚಿಂತನೆ ಮತ್ತು ಹೋರಾಟ ಪ್ರಾರಂಭ ಆಗುವುದಕ್ಕೆ ಮೊದಲು ಕರ್ನಾಟಕದಲ್ಲಿ ಅನೇಕರು ಸಮಾಜವಾದಿ ಚಿಂತನೆಗಳನ್ನು ನಡೆಸಿದ್ದರು. ಆದರೆ ಅದಕ್ಕಿಂತ ಮೊದಲಿನ ಚಿಂತನೆಗಳು ತಾತ್ವಿಕ ರೂಪದಲ್ಲಿದ್ದುದ್ದೇ ವಿನಾ ಪ್ರಾಯೋಗಿಕವಾಗಿ ಆಚರಣೆಗೆ ಬಂದಿರಲಿಲ್ಲ. ಗೋಪಾಲಗೌಡರು ಸಮಾಜವಾದದ ಕುರಿತು ಆಳವಾದ ಚಿಂತನೆಗಳನ್ನು ನಡೆಸಿದ್ದರು. ಮತ್ತು ಕರ್ನಾಟಕದ ಆರ್ಥಿಕ, ಸಾಮಾಜಿಕ ಸ್ಥಿತಿಗತಿಗಳಿಗನುಗುಣವಾಗಿ ಒಂದು ಸಮಾಜವಾದದ ತಾತ್ವಿಕ ಚೌಕಟ್ಟನ್ನು ರೂಪಿಸಿ ಕೊಂಡಿದ್ದರು. ಇಂತಹ ತತ್ತ್ವ ಮತ್ತು ಚಿಂತನೆಗಳನ್ನು ವಿಶೇಷವಾಗಿ ಮಲೆನಾಡಿನ ಜಮೀನ್ದಾರಿ ಪದ್ಧತಿಯಲ್ಲಿ ಪ್ರಯೋಗಿಸಿ ಮೊದಲ ಬಾರಿಗೆ ಐತಿಹಾಸಿಕ 'ಕಾಗೋಡು ಸತ್ಯಾಗ್ರಹ 'ವನ್ನು ನಡೆಸುವುದರ ಮೂಲಕ ಸಮಾಜವಾದಿ ತತ್ತ್ವದ ಆಚರಣೆಗೆ ಅವಕಾಶ ಮಾಡಿಕೊಟ್ಟರು. ಆದ್ದರಿಂದಲೆ ಕರ್ನಾಟಕದ ಈ ಹಿಂದಿನ ಸಮಾಜವಾದಿಗಳಿಗಿಂತ ಗೋಪಾಲಗೌಡರು ವಿಶಿಷ್ಟವಾಗಿ ಕಾಣುತ್ತಾರೆ.

ಕಾರ್ಲ್ ಮಾರ್ಕ್ಸ್, ಗಾಂಧಿ, ಲೋಹಿಯಾ, ಜಯಪ್ರಕಾಶ್ ನಾರಾಯಣ ಮುಂತಾದವರ ಸಮಾಜವಾದಿ ತತ್ವ, ಸಿದ್ಧಾಂತ ಮತ್ತು ಹೋರಾಟಗಳಿಂದ ಪ್ರಭಾವಿತರಾಗಿ ಅವರ ಆದರ್ಶ, ತತ್ವಗಳನ್ನು ಮೈಗೂಡಿಸಿಕೊಂಡ ಗೋಪಾಲಗೌಡರು ನಿರಂತರವಾಗಿ ಶೋಷಣಾರಹಿತ ಸಮಾಜದ ನಿರ್ಮಾಣಕ್ಕಾಗಿ ಹೋರಾಡಿದ ಅಪರೂಪದ ಪ್ರಾಮಾಣಿಕ ವ್ಯಕ್ತಿಯಾಗಿ ಕಾಣುತ್ತಾರೆ. ಇವರು ಶಾಲಾ ವಿದ್ಯಾಭ್ಯಾಸದ ಸಮಯದಲ್ಲಿ ಪಠ್ಯ ಪುಸ್ತಕಗಳ ಜೊತೆಯಲ್ಲಿ ಇತರ ಕೃತಿಗಳನ್ನು ಓದುತ್ತಿದ್ದರು. ಅದರಲ್ಲಿಯೂ ಕ್ರಾಂತಿಕಾರಿ ಸಾಹಿತ್ಯವನ್ನು ಓದುತ್ತಿದ್ದರು. ಹೀಗಾಗಿ ತಮ್ಮ ವಿದ್ಯಾರ್ಥಿ ದೆಸೆಯಲ್ಲಿಯೇ ಹೋರಾಟದ ಮನೋವೃತ್ತಿಯನ್ನು ಮೈಗೂಡಿಸಿಕೊಂಡರು. ಇವರು ಮೊದಲ ಬಾರಿಗೆ 1942 ರ "ಕ್ವಿಟ್ ಇಂಡಿಯಾ ಚಳುವಳಿ " ಯಲ್ಲಿ ಭಾಗವಹಿಸಿ ಮಲೆನಾಡಿನ ಭಾಗದ ವಿದ್ಯಾರ್ಥಿ ನಾಯಕರಾಗಿ ಹೊರಹೊಮ್ಮಿದ್ದರು. ನಂತರದ ದಿನಗಳಲ್ಲಿ 1947 ರ ಸ್ವಾತಂತ್ರ್ಯ ಚಳುವಳಿ, 1951 ಕಾಗೋಡು ಸತ್ಯಾಗ್ರಹ ಇಂತಹ ಹತ್ತು ಹಲವು ಹೋರಾಟಗಳಲ್ಲಿ ಭಾಗವಹಿಸಿದ್ದರಲ್ಲದೇ, ಅನೇಕ ಹೋರಾಟಗಳ ನೇತೃತ್ವ ವಹಿಸಿ ಈಗಾಗಲೇ

ಸಮಾಜದಲ್ಲಿ ಮನೆ ಮಾಡಿಕೊಂಡಿದ್ದ ಅಸಮಾನತೆ, ಅನ್ಯಾಯ, ಶೋಷಣೆ, ಮೌಢ್ಯತೆ ಧರ್ಮಾಂಧತೆಗಳನ್ನು ಸಮಾಜದಿಂದ ಹೊರಹಾಕಿ ಒಂದು ಸ್ವಸ್ತ, ನಿರ್ಮಲ, ಶೋಷಣಾರಹಿತ ಸಮಾಜದ ನಿರ್ಮಾಣಕ್ಕಾಗಿ ಯತ್ನಿಸಿದ ಮಹಾನ್ ನೇತಾರ ಮಾನವತಾವಾದಿ ಎನಿಸಿಕೊಂಡಿದ್ದಾರೆ.

ಗೋಪಾಲಗೌಡರು 1947 ಕ್ಕಿಂತ ಮೊದಲು ಕಾಂಗ್ರೆಸ್ ಪಕ್ಷದ ಕಾರ್ಯಕರ್ತರಾಗಿದ್ದು ದೇಶದ ಸ್ವಾತಂತ್ರ್ಯಕ್ಕಾಗಿ ನಡೆದ ಅನೇಕ ಹೋರಾಟಗಳಲ್ಲಿ ಭಾಗವಹಿಸಿ ಹೋರಾಟದ ಮುಂಚೂಣಿಯಲ್ಲಿದ್ದರು. ಆದರೆ ಸ್ವಾತಂತ್ರ್ಯಾ ನಂತರ ಕಾಂಗ್ರೆಸ್ ಪಕ್ಷದಿಂದ ಹೊರಬಂದ ಸಮಾಜವಾದಿ ನಾಯಕರುಗಳು ತಮ್ಮದೇ ಆದ ಸಮಾಜವಾದಿ ಪಕ್ಷವನ್ನು ಕಟ್ಟಿಕೊಂಡು ಆ ಮೂಲಕ ಸಮಾಜವಾದಿ ತತ್ವದ ಚಿಂತನೆಗೆ, ಆಚರಣೆಗೆ ಮತ್ತು ಬೆಳವಣಿಗೆಗೆ ಶ್ರಮಿಸಿದರು. ಈ ರೀತಿ ಶ್ರಮಿಸಿದವರಲ್ಲಿ ಗೋಪಾಲಗೌಡರು ಪ್ರಮುಖರಾಗಿ ಕಾಣುತ್ತಾರೆ. ಗೋಪಾಲಗೌಡರು ಕೇವಲ ಸಮಾಜವಾದಿ ಚಿಂತಕರು ಮಾತ್ರ ಆಗಿರದೆ ಸಮಾಜವಾದ ಅವರ ಜೀವನ ವಿಧಾನವಾಗಿತ್ತು ಎನ್ನಬಹುದು. ಏಕೆಂದರೆ ಅವರ ಪ್ರತಿ ಕಾರ್ಯದಲ್ಲಿಯೂ, ನಡತೆಯಲ್ಲಿಯೂ, ಚಿಂತನೆಯಲ್ಲಿಯೂ ಸಮಾಜವಾದ ಮಿಳಿತವಾಗಿತ್ತು. ಇವರು ನಡೆಸುತ್ತಿದ್ದ ಹೋರಾಟ ಮತ್ತು ಚಿಂತನೆಗಳು ಖಚಿತವಾಗಿದ್ದು, ಅವು ಸಮಾಜದ ಆಮೂಲಾಗ್ರ ಬದಲಾವಣೆಗೆ ಪೂರಕವಾಗಿದ್ದವು. ಇವರ ಸಮಾಜವಾದ ಕೇವಲ ಆರ್ಥಿಕ ವಿಚಾರಕ್ಕೆ ಸೀಮಿತವಾಗಿರದೆ ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ಸಾವಿರಾರು ವರ್ಷಗಳಿಂದ ರೂಢಿಯಲ್ಲಿದ್ದ ಮೌಢ್ಯಾಚರನೆಗಳನ್ನು ತೊಲಗಿಸಿ ಸಮಾಜವಾದಿ ಸಮಾಜವನ್ನು ನಿರ್ಮಿಸುವ ಗುರಿಯನ್ನು ಹೊಂದಿತ್ತು. ಇವರೊಬ್ಬ ಆದರ್ಶ ಚಿಂತಕರಾಗಿದ್ದು, ಪ್ರಾಮಾಣಿಕ, ನಿಷ್ಠಾವಂತ ಸಮಾಜವಾದಿ ನಾಯಕರಾಗಿದ್ದರು.

ಗೋಪಾಲಗೌಡರು ತಮ್ಮ ವೈಯಕ್ತಿಕ ಬದುಕಿನಲ್ಲಿ ಎಂದೂ ಸಮಾಜವಾದಿ ತತ್ವವನ್ನು ಬಿಟ್ಟು ಜೀವಿಸಲಿಲ್ಲ. ಜೊತೆಗೆ ಸಾರ್ವಜನಿಕ ಜೀವನದಲ್ಲಿಯಾಗಲಿ, ಶಾಸಕರಾಗಿ ಕಾರ್ಯ ನಿರ್ವಹಿಸುವ ಸಂದರ್ಭದಲ್ಲಾಗಲಿ ಸಮಾಜವಾದಿ ತತ್ವಕ್ಕೆ ನಿಷ್ಠರಾಗಿಯೇ ಬದುಕಿದ್ದರು. ತಮ್ಮ ಜೀವನದುದ್ದಕ್ಕೂ ಮಾಡಿದ ಚಿಂತನೆಗಳು, ನಡೆಸಿದ ಹೋರಾಟಗಳು, ರೂಪಿಸಿದ ಕಾರ್ಯಕ್ರಮಗಳು ಕರ್ನಾಟಕದ ಅದರಲ್ಲಿಯೂ ಮಲೆನಾಡಿನ ಜನತೆಯಲ್ಲಿ ಹೊಸ ಜೀವನ ವಿಧಾನ ರೂಪಿಸುವಲ್ಲಿ ಪ್ರೇರಕವಾಗಿದ್ದವು. ಮಲೆನಾಡಿನ ಭಾಗದಲ್ಲಿ ಶೋಚನೀಯ ಬದುಕನ್ನು

ಬದುಕುತ್ತಿದ್ದ ಗೇಣಿ ರೈತರ ಸಮಸ್ಯೆಗಳನ್ನು ತೊಡೆದು ಹಾಕಲು ಟೊಂಕಕಟ್ಟಿ ನಿಲ್ಲುವುದರ ಮೂಲಕ ''ಉಳುವವನೆ ಹೊಲದೊಡೆಯ '' ಎಂಬ ಘೋಷಣೆಯ ಹರಿಕಾರರಾದರು. ಜೊತೆಗೆ ರಾಷ್ಟ್ರ ಮಟ್ಟದಲ್ಲಿ ಭೂಸುಧಾರಣಾ ಕಾರ್ಯಕ್ರಮಗಳನ್ನು ಜಾರಿಗೊಳಿಸುವಲ್ಲಿ ಇವರ ಪ್ರಭಾವ ವಿಶೇಷವಾಗಿತ್ತು. ಅಲ್ಲದೆ ಕರ್ನಾಟಕದಲ್ಲಿ ಭೂಸುಧಾರಣಾ ಕಾಯ್ದೆ ರಚನೆಯಾಗಲು ಮತ್ತು ಅದು ಯಶಸ್ವಿಯಾಗಿ ಜಾರಿಗೊಳ್ಳಲು ಇವರ ನಿರಂತರ ಪ್ರಯತ್ನ ಮತ್ತು ಪ್ರಭಾವವೇ ಕಾರಣವಾಗಿತ್ತು. ಗೋಪಾಲಗೌಡರು ಶಾಸಕಾರಗಿ ತಮ್ಮ ಸೈದ್ಧಾಂತಿಕ ಹಿನ್ನೆಲೆಯುಳ್ಳ ನೇರ ನಡೆ -ನುಡಿಗಳಿಂದ ಸರ್ಕಾರದ ಗಮನ ಸೆಳೆಯುವುದರ ಮೂಲಕ ಸರ್ಕಾರ ಮಾಡಿದ ತಪ್ಪುಗಳನ್ನು ಬಯಲಿಗೆಳೆಯುತ್ತಿದ್ದರು. ಅಲ್ಲದೆ ಇದೇ ಸಂದರ್ಭದಲ್ಲಿ ಸಮಾಜವಾದಿ ತತ್ವಗಳ ಪ್ರಸ್ತುತತೆಯನ್ನು ವಿಶ್ಲೇಷಿಸಿ ಹಲವಾರು ಸಮಾಜವಾದಿ ಕಾರ್ಯಕ್ರಮಗಳನ್ನು ಜಾರಿಗೊಳಿಸುವಲ್ಲಿ ಯಶಸ್ವಿಯಾಗಿದ್ದಾರೆ.

ಗೋಪಾಲಗೌಡರು ಸಮಾಜವಾದದ ಬಗೆಗಿನ ಚಿಂತನೆ, ಹೋರಾಟಗಳ ಜೊತೆಗೆ ಸಾಹಿತ್ಯ, ಸಂಗೀತ, ಯಕ್ಷಗಾನ , ನಾಡಿನ ಇತಿಹಾಸ ಮುಂತಾದ ಕಲೆಗಳು ಮತ್ತು ನಾಡು -ನುಡಿಯ ಬಗ್ಗೆ ಅಪಾರ ಆಸಕ್ತಿ ಮತ್ತು ಕಾಳಜಿ ಇಟ್ಟುಕೊಂಡ ವ್ಯಕ್ತಿಯಾಗಿದ್ದರು. ಹಾಗೆಯೇ ಯಾವುದೇ ವಿಷಯದ ಕುರಿತು ಖಚಿತವಾಗಿ ಮಾತನಾಡುವ, ಚರ್ಚಿಸುವ ಸಾಮರ್ಥ್ಯ ಹಾಗೂ ಜ್ಞಾನವನ್ನು ಹೊಂದಿದ್ದರು. ಇವರು ಯಾವುದೇ ಸಂದರ್ಭ ಅಥವಾ ಪರಿಸ್ಥಿತಿಯಲ್ಲಿ ಮಾತನಾಡುತ್ತಿದ್ದರೂ ಅದಕ್ಕೊಂದು ಸೈದ್ಧಾಂತಿಕ ಹಿನ್ನೆಲೆ ಇಲ್ಲದೆ ಮಾತನಾಡುತ್ತಿರಲಿಲ್ಲ. ಇವರು ಯಾವುದೇ ಸಾರ್ವಜನಿಕ ಭಾಷಣಗಳಲ್ಲಾಗಲಿ, ಚುನಾವಣಾ ಪ್ರಚಾರ ಭಾಷಣಗಳಲ್ಲಾಗಲಿ ಸಮಾಜದ ಸಾಮರಸ್ಯ , ಶಾಂತಿಯನ್ನು ಕದಡುವ ಅಂಶಗಳಾದ ಧಾರ್ಮಿಕ ಭಾವನೆಯನ್ನಾಗಲಿ, ಜಾತಿಯನ್ನಾಗಲಿ ಪ್ರಸ್ತಾಪಿಸುತ್ತಿರಲಿಲ್ಲ. ಕಾರಣ ಇವರ ಪ್ರತಿಯೊಂದು ಭಾಷಣದ, ಕಾರ್ಯಕ್ರಮದ ಮುಖ್ಯ ಉದ್ದೇಶ ಸಮಾಜದ ಅಭಿವೃದ್ಧಿಯಾಗಿತ್ತೇ ಹೊರತು ವೈಯಕ್ತಿಕ ಹಿತಸಾಧನೆಯಾಗಲಿರಲಿಲ್ಲ. ಅಂತೆಯೇ ಕರ್ನಾಟಕದ ಏಕೀಕರಣ, ಮಾತೃಭಾಷೆಯಲ್ಲಿ ಶಿಕ್ಷಣ, ರಾಜಧನ ರದ್ಧತಿ, ಉಚಿತ ನ್ಯಾಯ, ಭೂಸುಧಾರಣೆಯಂತಹ ಹತ್ತು ಹಲವು ವಿಚಾರಗಳ ಕುರಿತ ನಿರಂತರ ಹೋರಾಟ ನಡೆಸಿದರು. ಹಾಗೂ ಪ್ರತಿಯೊಂದು ಹೋರಾಟದಲ್ಲಿಯೂ ಸಮಾಜವಾದಿ ತತ್ವದ ಆಚರಣೆಗೆ ಪ್ರೇರಣೆ ಮತ್ತು ಪ್ರೋತ್ಸಾಹ ನೀಡುತ್ತಿದ್ದರು.

ಸಮಾಜವಾದ ಕಾಲದಿಂದ ಕಾಲಕ್ಕೆ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುವುದು ಕಂಡುಬರುತ್ತದೆ. ಇಂತಹ ಸಮಾಜವಾದವನ್ನು ಕರ್ನಾಟಕದ ಸಾಮಾಜಿಕ - ಆರ್ಥಿಕ ಪರಿಸ್ಥಿತಿಗೆ ಹೊಂದಾಣಿಕೆಯಾಗುವ ರೀತಿಯಲ್ಲಿ ಚಿಂತಿಸಿ, ರೂಪಿಸಿ, ಆಚರಣೆಗೆ ತರುವ ಪ್ರಯತ್ನವನ್ನು ಗೋಪಾಲಗೌಡರು ಮಾಡಿದ್ದಾರೆ. ಇಂತಹ ಧೀಮಂತ, ನಿಷ್ಠಾವಂತ ಸಮಾಜವಾದಿ ಚಿಂತಕ ಮತ್ತು ಹೋರಾಟಗಾರನ ಮೂಲಭೂತ ತತ್ವ - ನಿಷ್ಠೆ ಕುರಿತು ಅಧ್ಯಯನ ಮಾಡುತ್ತಿದ್ದು ಆ ಮೂಲಕ ಅವರ ಚಿಂತನೆ ಮತ್ತು ಹೋರಾಟಗಳ ಕೆಲವು ವಿಶಿಷ್ಟ ಗುಣಗಳನ್ನು ಬೆಳಕಿಗೆ ತರುವುದು ಇಂದಿನ ಭ್ರಷ್ಟ , ತತ್ವರಹಿತ, ಸಿದ್ಧಾಂತರಹಿತ, ದ್ವೇಷದ ಕೊಳಕು ರಾಜಕಾರಣದ ಸಂದರ್ಭದಲ್ಲಿ ಉಚಿತವೆಂದು ಭಾವಿಸಿದ್ದೇನೆ. ಹಾಗೆಯೇ ಗೋಪಾಲಗೌಡರ ಚಿಂತನೆ ಮತ್ತು ಅವರ ಸಾಧನೆಗಳನ್ನು ಕುರಿತು ಇದುವರೆಗೆ ಅನೇಕರು ಅಧ್ಯಯನ ಮಾಡಿ ಅವರ ಚಿಂತನೆ ಮತ್ತು ಸಾಧನೆಗಳ ಕೆಲವೊಂದು ಮುಖಗಳನ್ನು ಬೆಳಕಿಗೆ ತರುವ ಪ್ರಯತ್ನ ಮಾಡಿದ್ದಾರೆ. ಪ್ರಸ್ತುತ ನಾನು ವಿಶೇಷವಾಗಿ ಗೋಪಾಲಗೌಡರ ಸಮಾಜವಾದಿ ತತ್ವ -ನಿಷ್ಠೆ ಎಂಬ ವಿಷಯದ ಕುರಿತು ಅಧ್ಯಯನ ಮಾಡಹೊರಟಿದ್ದು, ಅವರ ಬದುಕಿನಲ್ಲಿ ಸಮಾಜವಾದ ಹೇಗೆ ಆಚರಿಸಲ್ಪಟ್ಟಿತ್ತು. ಸಮಾಜವಾದ ತತ್ವದ ಆಧಾರದ ಮೇಲೆ ಅವರು ಮಾಡಿದ ಹೋರಾಟ ಮತ್ತು ಸಾಧನೆಗಳೇನು? ಇಂತಹ ಹೋರಾಟದ ಪ್ರಭಾವ ಕರ್ನಾಟಕ ರಾಜ್ಯ ಅದರಲ್ಲಿಯೂ ವಿಶೇಷವಾಗಿ ಮಲೆನಾಡಿನ ಭಾಗದ ಜನತೆಯ ಮೇಲೆ ಹೇಗೆ ಆಗಿದೆ ಹಾಗೂ ಅವರ ಚಿಂತನೆ ಮತ್ತು ಹೋರಾಟಗಳು ಎಷ್ಟರ ಮಟ್ಟಿಗೆ ಪ್ರಸ್ತುತವಾಗಿವೆ ಎಂಬ ವಿಷಯಗಳ ಮೇಲೆ ಬೆಳಕು ಚೆಲ್ಲುವ ಸಣ್ಣ ಪ್ರಯತ್ನ ಮಾಡಿದ್ದೇನೆ. ಇಂತಹ ನನ್ನ ಪ್ರಯತ್ನ ಗೋಪಾಲಗೌಡರ ತತ್ವಾದರ್ಶಗಳನ್ನು ಪರಿಚಯಿಸುವಲ್ಲಿ ಪ್ರಸ್ತುತಪಡಿಸುವಲ್ಲಿ , ಪ್ರಸ್ತುವನ್ನಾಗಿಸುವಲ್ಲಿ ಸಹಕಾರಿಯಾಗಬಹುದು. ಜೊತೆಗೆ ಅವರ ತತ್ವಾದರ್ಶಗಳ ಅಗತ್ಯತೆಯನ್ನು ಪ್ರತಿಪಾದಿಸುವ ಮೂಲಕ ಇಂದಿನ ಸಮಾಜದಲ್ಲಿ ಆಳವಾಗಿ ಬೇರೂರಿರುವ ಅನ್ಯಾಯ, ಭ್ರಷ್ಟಾಚಾರ, ಮೌಢ್ಯಾಚರಣೆಗಳನ್ನು ತೊಡೆದು ಹಾಕಿದ ಒಂದು ಸ್ವಸ್ಥ ಸಮಾಜದ ನಿರ್ಮಾಣಕ್ಕೆ ಪೂರಕ ಪ್ರಯತ್ನವಾಗಬಹುದೆಂದು ಆಶಿಸಿದ್ದೇನೆ ಮತ್ತು ಪ್ರಸ್ತುತ ಹದಗೆಟ್ಟ ರಾಜ್ಯದ ರಾಜಕಾರಣವನ್ನು ಶುದ್ಧೀಕರಿಸುವಲ್ಲಿ ಅಷ್ಟಿಷ್ಟು ಸಹಾಯಕವಾಗಬಹುದೆಂದು ಭಾವಿಸಿದ್ದೇನೆ.

## ಅಧ್ಯಾಯ -2

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಶಾಂತವೇರಿ ಗೋಪಾಲಗೌಡರೊಬ್ಬ ಮಲೆನಾಡಿನ ಭಾಗದ ಕ್ರಾಂತಿಕಾರಿ ಸಮಾಜವಾದಿ ಹೋರಾಟಗಾರರಾಗಿದ್ದರು. ಇವರು ರಾಜಕೀಯ ತತ್ವ ಮತ್ತು ಸಿದ್ಧಾಂತಗಳನ್ನು ಆಳವಾಗಿ ಅಧ್ಯಯನ ಮಾಡಿದ್ದರು. ಅಲ್ಲದೆ ಸಾಹಿತ್ಯ ಅಭ್ಯಾಸದಲ್ಲಿಯೂ ವಿಶೇಷ ಆಸಕ್ತಿ ಹೊಂದಿದ್ದರು. ಇವರು ಇಂತಹ ಆಳವಾದ ಅಧ್ಯಯನದ ಮೂಲಕ ವಿಶಿಷ್ಟ ಜ್ಞಾನವನ್ನು ಸಂಪಾದಿಸಿದ್ದರು. ಅಲ್ಲದೆ ಇವರು ಹುಟ್ಟಿನಿಂದಲೇ ಸ್ವಾಭಾವಿಕವಾಗಿಯೇ ವಿಶಿಷ್ಟ ವರ್ಚಸ್ಸಿನ ಗುಣಗಳನ್ನು ಹೊಂದಿದ್ದರು. ಜೊತೆಗೆ ಆಗಿನ ಭಾರತದ ಪರಿಸ್ಥಿತಿ, ತಾವು ಹುಟ್ಟಿ ಬೆಳೆದ ಪರಿಸರ, ವಿಭಿನ್ನ ವಿದ್ವಾಂಸರ, ಚಿಂತಕರ, ಬರಹಗಾರರ ಪ್ರಭಾವಗಳಿಂದಾಗಿ ಸಮಾಜವಾದದ ಬಗ್ಗೆ ಆಳವಾಗಿ ಚಿಂತಿಸತೊಡಗಿದ್ದರು. ಮತ್ತು ಇವರ ಚಿಂತನೆಗಳೆಲ್ಲವೂ ಆ ಕಾಲಘಟ್ಟದ ಸಾಮಾಜಿಕ, ಆರ್ಥಿಕ ಸಮಸ್ಯೆಗಳನ್ನು ತೊಡೆದು ಹಾಕುವ ಮತ್ತು ಆ ಮೂಲಕ ಭವಿಷ್ಯದಲ್ಲಿ ಸಮಾಜವಾದಿ ತತ್ವವನ್ನಾಧರಿಸಿದ ಮಾದರಿ ಸಮಾಜದ ಸ್ಥಾಪನೆಗೆ ಪೂರಕವಾಗಿರುತ್ತಿದ್ದವು.

ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡು ಭಾರತಕ್ಕೆ ಸ್ವಾತಂತ್ರ್ಯ ತಂದುಕೊಡುವಲ್ಲಿ ಯಶಸ್ವಿಯಾದ ಸಮಾಜವಾದಿ ಹಿನ್ನೆಲೆಯುಳ್ಳ ನಾಯಕರುಗಳ ಪ್ರಭಾವ ಮತ್ತು ಸಂವಿಧಾನ ತಜ್ಞರುಗಳ ಪ್ರಯತ್ನಗಳಿಂದಾಗಿ ಭಾರತದ ಸಂವಿಧಾನವನ್ನು ರಚಿಸುವ ಸಂದರ್ಭದಲ್ಲಿಯೇ ಅನೇಕ ಸಮಾಜವಾದಿ ತತ್ವಗಳನ್ನು ಸಂವಿಧಾನದಲ್ಲಿ ಸೇರಿಸಲಾಯಿತು. ಆ ನಂತರದ ದಿನಗಳಲ್ಲಿಯೂ ಸಮಾಜವಾದಿ ನೀತಿಗಳನ್ನು ರಚಿಸುವಲ್ಲಿ, ಮತ್ತು ಅವುಗಳನ್ನು ಅನುಷ್ಠಾನಗೊಳಿಸುವಲ್ಲಿ ಅನೇಕ ಸಮಾಜವಾದಿ ಚಿಂತಕರು ಹಾಗೂ ನಾಯಕರುಗಳು ಕಾರಣರಾಗಿದ್ದಾರೆ. ಅಂತೆಯೇ ಭಾರತದ ಸಂವಿಧಾನದ ಪೂರ್ವ ಪೀಠಿಕೆಯಲ್ಲಿ ಸಂವಿಧಾನದ 42ನೇ ತಿದ್ದುಪಡಿ ಮೂಲಕ 'ಸಮಾಜವಾದಿ ' ಎಂಬ ಪದವನ್ನು ಸೇರಿಸುವುದರ ಮೂಲಕ 'ಸಮಾಜವಾದಿ ಸಮಾಜವನ್ನು ' ನಿರ್ಮಾಣ ಮಾಡುವ ಗುರಿಯನ್ನು ಭಾರತ ದೇಶ ಹೊಂದಿದೆ ಎಂಬುದನ್ನು ತಿಳಿಸಲಾಗಿದೆ. ಈ ಉದ್ದೇಶವನ್ನು ಇಟ್ಟುಕೊಂಡು ಭಾರತ ಸರ್ಕಾರ ಮತ್ತು ಬಹುತೇಕ ಎಲ್ಲಾ ರಾಜ್ಯ ಸರ್ಕಾರಗಳು ಈ ನಿಟ್ಟಿನಲ್ಲಿ ಕಾರ್ಯೋನ್ಮುಖವಾಗಿವೆ. ಅವರಲ್ಲಿಯೂ

ಕರ್ನಾಟಕ ರಾಜ್ಯದಲ್ಲಿ ಗೋಪಾಲಗೌಡರ ಪರಿಶ್ರಮದ ಫಲವಾಗಿ ಅನೇಕ ಸಮಾಜವಾದಿ ತತ್ವಗಳನ್ನು ಅನುಷ್ಠಾನಕ್ಕೆ ತರುವುದರ ಮೂಲಕ ಸಮಾಜವಾದಿ ತತ್ವವನ್ನಾಧರಿಸಿದ ಶೋಷಣೆಯಿಂದ ಮುಕ್ತವಾದ ಸಮಾಜದ ನಿರ್ಮಾಣದ ಕಡೆಗೆ ಪ್ರಯತ್ನಗಳು ನಡೆಯುತ್ತಿದ್ದವು.

ಗೋಪಾಲಗೌಡರಂತಹ ಪ್ರಾಮಾಣಿಕ ಸಮಾಜವಾದಿ ಚಿಂತಕರು, ಹೋರಾಟಗಾರರು ಇಂದಿನ ದಿನಗಳಲ್ಲಿ ಕಾಣಸಿಗುವುದು ದುಸ್ತರವಾಗಿದೆ. ಇಂದು ಜನರನ್ನು ತಪ್ಪು ದಾರಿಗೆಳೆಯುವ ಜನರನ್ನು ಮೋಸಗೊಳಿಸುವ, ತತ್ವರಹಿತ, ಭ್ರಷ್ಟ ನಾಯಕರುಗಳು ಬೆಳೆಯುತ್ತಿದ್ದಾರೆ. ದೇಶ ಖಾಸಗೀಕರಣ, ಉದಾರೀಕರಣ, ಜಾಗತೀಕರಣದ ಅಲೆಗೆ ಸಿಕ್ಕು ತತ್ತರಿಸುತ್ತಿದೆ. ಈ ಜಾಗತೀಕರಣದ ಹೆಸರಿನಲ್ಲಿ ಭಾರತ ಇನ್ನೊಮ್ಮೆ ಸಾಮ್ರಾಜ್ಯಶಾಹಿಗಳ, ಬಂಡವಾಳಶಾಹಿಗಳ ಕಪಿ ಮುಷ್ಟಿಗೆ ಪರೋಕ್ಷವಾಗಿ ಸಿಲುಕಿಕೊಳ್ಳುವ ಲಕ್ಷಣಗಳು ದಟ್ಟವಾಗುತ್ತಿದೆ. ಇದರಿಂದಾಗಿ ಸಾಮಾನ್ಯ ಕೆಳವರ್ಗದ ಜನರ ಬದುಕು ಸಂಕಷ್ಟಕ್ಕೊಳಗಾಗುತ್ತಿದೆ. ಈ ವರ್ಗದ ಜನತೆ ಉಸಿರು ಕಟ್ಟಿದ ವಾತಾವರಣದಲ್ಲಿ ಬದುಕು ಸಾಗಿಸಬೇಕಾದ ಪರಿಸ್ಥಿತಿ ನಿರ್ಮಾಣವಾಗಿದೆ. ಮುಂದಿನ ಜೀವನ ಕರಾಳವಾಗಿ ಪರಿಣಮಿಸಿದೆ. ಈ ಮಧ್ಯೆ ಸಮಾಜವಾದಿ ನಾಯಕರ, ಚಿಂತಕರ, ಪ್ರಭಾವ ಮತ್ತು ಪ್ರಯತ್ನಗಳಿಂದ ಅಸ್ತಿತ್ವ ಪಡೆದುಕೊಳ್ಳುತ್ತಿದ್ದ ಸಮಾಜವಾದಿ ತತ್ವಗಳು, ಆಚರಣೆಗಳು ನಿಧಾನವಾಗಿ ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳಲಾರಂಭಿಸಿದೆ. ಸಮಾಜವಾದ ಇಂದು ಕೇವಲ ಕನಸಾಗುವ ಸ್ಥಿತಿ ನಿರ್ಮಾಣವಾಗಿದೆ. ಆದ್ದರಿಂದ ಇಂತಹ ನೀತಿಗೆಟ್ಟ, ತತ್ವಹೀನ ರಾಜಕೀಯ ನಾಯಕರುಗಳ ಕೈಗೆ ರಾಜ್ಯಾಡಳಿತ ಸಿಕ್ಕು ಎಲ್ಲೆಲ್ಲಿಯೂ ಭ್ರಷ್ಟಾಚಾರದ ದುರಾಡಳಿತ ನಡೆಯುತ್ತಿದೆ. ಇಂತಹ ಸಂದರ್ಭದಲ್ಲಿ ಗೋಪಾಲಗೌಡರ ವಿಶಿಷ್ಟವಾದ ಸಮಾಜವಾದಿ ಚಿಂತನೆಗಳನ್ನು, ಅವರ ವಿಶಿಷ್ಟ ಹೋರಾಟದ ವಿಧಾನಗಳನ್ನು ಮತ್ತು ಸಾಧನೆಗಳನ್ನು ಕುರಿತು ಅಧ್ಯಯನ ಮಾಡುವುದು ಅಗತ್ಯವೆನಿಸಿ ಈ ಸಂಶೋಧನೆಯನ್ನು ಕೈಗೆತ್ತಿಕೊಂಡಿದ್ದೇನೆ.

ಗೋಪಾಲಗೌಡರು ತಮ್ಮ ಖಾಸಗೀ ಬದುಕಿನಲ್ಲಿ ಮತ್ತು ಸಾರ್ವಜನಿಕ ಬದುಕಿನಲ್ಲಿ ಒಬ್ಬ ಅಪ್ಪಟ ಸಮಾಜವಾದಿ ಚಿಂತಕ ಮತ್ತು ಹೋರಾಟಗಾರರಾಗಿದ್ದರು. ಇವರು ನುಡಿದಂತೆ ನಡೆಯುವ ವ್ಯಕ್ತಿತ್ವವನ್ನು ರೂಢಿಸಿಕೊಂಡಿದ್ದರು. ಇವರ ನೇರ ನಡೆ –ನುಡಿಗಳೇ ಇವರನ್ನು

ನಾಯಕರನ್ನಾಗಿ ರೂಪಿಸಿತು. ಇವರು ಯಾವತ್ತೂ ಸಾಧಿಸಲು ಅಸಾಧ್ಯವಾದ ಮಾತುಗಳನ್ನು ಆಡುವುದಾಗಲಿ, ಸಮಾಜದ ಪ್ರಗತಿಗೆ ಮಾರಕ ಆಗುವ ಕಾರ್ಯಗಳಲ್ಲಿ ತೊಡಗುವುದಾಗಲಿ ಮಾಡುತ್ತಿರಲಿಲ್ಲ. ನೈತಿಕವಾಗಿ, ಕಾನೂನಿನನ್ವಯ ಸರಿಕಾಣದ್ದನ್ನು ದಿಟ್ಟವಾಗಿ ವಿರೋಧಿಸುತ್ತಿದ್ದರು. ಯಾವುದೇ ಅನ್ಯಾಯ, ಶೋಷಣೆ, ದಬ್ಬಾಳಿಕೆಗಳನ್ನು ಸಹಿಸುತ್ತಿರಲಿಲ್ಲ. ದೀನ ದಲಿತರ, ತುಳಿತಕ್ಕೊಳಗಾದವರ ಪರ ನಿರಂತರವಾಗಿ ಹೋರಾಡುವುದರ ಮೂಲಕ ಸಮಾಜವಾದಿ ತತ್ವಗಳನ್ನು ಅನುಷ್ಠಾನಗೊಳಿಸುವುದಕ್ಕಾಗಿ ನಿರಂತರ ಹೋರಾಡಿದ್ದರು. ಆದ್ದರಿಂದ ಇಂತಹ ವ್ಯಕ್ತಿಯ ಸಮಾಜವಾದಿ ತತ್ವ -ನಿಷ್ಠೆ ಕುರಿತು ಅಧ್ಯಯನ ಮಾಡುವುದು ಸೂಕ್ತವೆಂದು ಭಾವಿಸಿ ಗೋಪಾಲಗೌಡರ ಸಮಾಜವಾದಿ ತತ್ವ -ನಿಷ್ಠೆ ಎಂಬ ವಿಷಯವನ್ನು ನಾನು ಆಯ್ಕೆ ಮಾಡಿಕೊಂಡಿದ್ದೇನೆ. ನನ್ನ ಈ ಪ್ರಯತ್ನ ಸಮಾಜವಾದಿ ತತ್ವಗಳು ತಮ್ಮ ಅಸ್ತಿತ್ವವನ್ನು ಕಳೆದು ಕೊಳ್ಳುತ್ತಿರುವ ಈ ಸಂದರ್ಭದಲ್ಲಿ ಅವುಗಳನ್ನು ಉಳಿಸಿಕೊಳ್ಳುವ ಮತ್ತು ಬೆಳೆಸುವ ನಿಟ್ಟಿನಲ್ಲಿ ಇದೊಂದು ಸಣ್ಣ ಪ್ರಯತ್ನವೆಂದು ಭಾವಿಸಿದ್ದೇನೆ.

ಗೋಪಾಲಗೌಡರ ವ್ಯಕ್ತಿತ್ವದ ಎಲ್ಲಾ ಆಯಾಮಗಳನ್ನು, ಅವರ ಎಲ್ಲಾ ವಿಧವಾದ ಚಿಂತನೆ ಮತ್ತು ಹೋರಾಟಗಳನ್ನು ಕುರಿತು ಅಧ್ಯಯನ ಮಾಡುವುದು ಮತ್ತು ವಿಮರ್ಶಿಸುವುದು ಶೋಧನೆಯ ದೃಷ್ಟಿಯಿಂದ ಬಹಳ ವಿಶಾಲವಾಗುತ್ತದೆ ಮತ್ತು ನನ್ನ ಶಕ್ತಿಗೆ ಮೀರಿದ ಪ್ರಯತ್ನ ವಾಗಬಹುದೆಂದು ನಿರ್ಧರಿಸಿ ಅವರ ಬದುಕಿನ ಒಂದು ಭಾಗವಾದ ಸಮಾಜವಾದಿ ತತ್ವ - ನಿಷ್ಠೆ ಎಂಬ ವಿಷಯಕ್ಕೆ ನನ್ನ ಅಧ್ಯಯನವನ್ನು ಮಿತಿಗೊಳಿಸಿಕೊಂಡಿದ್ದೇನೆ. ಇವರು ಸಮಾಜವಾದಿ ತತ್ವಗಳ ಕಡೆಗೆ ಹೇಗೆ ಆಕರ್ಷಿತರಾದರು, ಸಮಾಜವಾದಿ ತತ್ವ ಮತ್ತು ಚಿಂತನೆಗಳು ಇವರ ಮೇಲೆ ಹೇಗೆ ಪ್ರಭಾವ ಬೀರಿದವು. ಇಂತಹ ತತ್ವಗಳನ್ನು ಹೇಗೆ ತಮ್ಮ ವೈಯಕ್ತಿಕ ಮತ್ತು ಸಾರ್ವಜನಿಕ ಜೀವನದಲ್ಲಿ ಅಳವಡಿಸಿ ಅನುಸರಿಸಿಕೊಂಡು ಬಂದರು. ಸಮಾಜವಾದಿ ತತ್ವಗಳನ್ನು ಎಷ್ಟು ಪ್ರಾಮಾಣಿಕವಾಗಿ ಅನುಸರಿಸಿದರು ಮತ್ತು ಅದಕ್ಕೆ ಎಷ್ಟು ನಿಷ್ಠರಾಗಿದ್ದರು. ಸಮಾಜವಾದಿ ಹೋರಾಟ-ಪ್ರಯತ್ನಗಳ ಮೂಲಕ ಮಾಡಿರುವ ಸಾಧನೆಗಳೇನು ? ಎಂಬ ಪ್ರಶ್ನೆಗಳನ್ನು ಎದುರಿಗಿಟ್ಟುಕೊಂಡು ಆ ಕುರಿತು ಇಲ್ಲಿ ಪರಿಹಾರಗಳನ್ನು ಕಂಡುಕೊಳ್ಳಲು ಯತ್ನಿಸಲಾಗಿದೆ.

ಈ ಅಧ್ಯಯನಕ್ಕೆ ಪೂರಕವಾಗಿ ಲಿಖಿತ ಆಧಾರಗಳನ್ನು ಅವಲಂಭಿಸಿದ್ದು, ಗೋಪಾಲಗೌಡರ ಜೀವನ, ಹೋರಾಟ, ಸಾಧನೆಗಳಿಗೆ ಸಂಬಂಧಿಸಿದ ಗ್ರಂಥಗಳನ್ನು, ಲೇಖನಗಳನ್ನು ಆಧಾರ ವಾಗಿಟ್ಟುಕೊಂಡು ಅಧ್ಯಯನ ಮಾಡಹೊರಟಿದ್ದೇನೆ. ಜೊತೆಗೆ ಗೋಪಾಲಗೌಡರ ಸ್ನೇಹಿತರನ್ನು , ಒಡನಾಡಿಗಳನ್ನು ಮತ್ತು ಅವರ ತತ್ವ - ನಿಷ್ಠೆ ಬಗ್ಗೆ ವಿಶೇಷ ಆಸಕ್ತಿ ಇರುವಂತಹ ಕೆಲವು ವ್ಯಕ್ತಿಗಳನ್ನು ಸಂದರ್ಶಿಸಿ ನನ್ನ ವಿಷಯಕ್ಕೆ ಸಂಬಂಧಿಸಿದ ಹಲವಷ್ಟು ವಿಷಯಗಳನ್ನು ಸಂಗ್ರಹಿಸಿ ಅವುಗಳನ್ನು ಕ್ರೋಢೀಕರಿಸಿ ಸಂಪ್ರಬಂಧವನ್ನು ರಚಿಸಿದ್ದೇನೆ.

ಅಧ್ಯಾಯ -3

# ಗೋಪಾಲಗೌಡರ ಸಂಕ್ಷಿಪ್ತ ಜೀವನ ಪರಿಚಯ

ಶ್ರೀ ಶಾಂತವೇರಿ ಗೋಪಾಲಗೌಡರು ತೀರ್ಥಹಳ್ಳಿ ತಾಲ್ಲೂಕು ಆರಗ ಸಮೀಪದ ಶಾಂತವೇರಿ ಎಂಬ ಚಿಕ್ಕ ಹಳ್ಳಿಯಲ್ಲಿ 1923 ಮಾರ್ಚ್ 14 ರಂದು ತಂದೆ ಕೊಲ್ಲೂರಯ್ಯಗೌಡ, ತಾಯಿ ಶೇಷಮ್ಮ ದಂಪತಿಗಳ ಮಗನಾಗಿ ಜನಿಸಿದರು. ಇವರ ಕುಟುಂಬದವರು ಮೂಲತಃ ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲ್ಲೂಕಿನ 'ಸಾಂತವೇರಿ ' ಊರಿನವರೆಂಬ ಪ್ರತೀತಿ ಇದೆ. ಇವರ ಪೂರ್ವಿಕರು ಕೆಳದಿ ನಾಯಕರ ಕಾಲದಲ್ಲಿ ಸೈನಿಕ ಕಾರ್ಯನಿಮಿತ್ತ ಆರಗಕ್ಕೆ ಬಂದು ನೆಲೆಸಿದರು ಎಂಬುದಕ್ಕೆ ಪುರಾವೆಗಳಿವೆ. ಅಲ್ಲದೆ ಗೋಪಾಲಗೌಡರೇ ಸ್ವತಃ ಈ ವಿಷಯವನ್ನು ಹೇಳಿಕೊಳ್ಳುತ್ತಿದ್ದುದೂ ಉಂಟು. ಇವರ ಕುಟುಂಬ ಮೊದಲು ಶ್ರೀಮಂತ ಅವಿಭಕ್ತ ಕುಟುಂಬ ವಾಗಿತ್ತು. ಆದರೆ 1912 ರಲ್ಲಿ ವಿಭಕ್ತ ಕುಟುಂಬಗಳಾಗಿ ವಿಭಜನೆಗೊಂಡು ಆಸ್ತಿ ಹಂಚಿಕೆ ಯಾಯಿತು. ಈ ವಿಭಜನೆ ಮುಂದಿನ ದಿನಗಳಲ್ಲಿ ಇವರ ಕುಟುಂಬದ ಬಡತನಕ್ಕೆ ಕಾರಣವಾಯಿತು ಎಂದು ಭಾವಿಸಲಾಗಿದೆ.

ಹೀಗಾಗಿ ಶ್ರೀ ಶಾಂತವೇರಿ ಗೋಪಾಲಗೌಡರು ಶ್ರೀಮಂತ ಪರಂಪರೆಯ ಕುಟುಂಬದವರಾದರೂ ಬಡತನದಲ್ಲಿ ಜನಿಸಿದರು. ಇವರ ತಂದೆಯವರು ಅಲ್ಪಸ್ವಲ್ಪ ಜಮೀನನ್ನು ಹೊಂದಿದ್ದರು. ಜೊತೆಗೆ ಅಂಚೆ ಪೇದೆಯಾಗಿ ಕಾರ್ಯನಿರ್ವಹಿಸುತ್ತಿದ್ದರು. ಅಂಚೆ ಪೇದೆಯ ಕಾರ್ಯದ ಜೊತೆಗೆ ತಮಗಿರುವ ಜಮೀನನ್ನು ವ್ಯವಸ್ಥಿತವಾಗಿ ನೋಡಿಕೊಳ್ಳದ ಕಾರಣ ಜಮೀನು ಹಾಳಾಗತೊಡಗಿತು. ಈ ಮಧ್ಯೆ ಅಮ್ಮ ಶ್ರೀಮಂತ ಪರಂಪರೆಯ ಕುಟುಂಬದವರಾದ್ದರಿಂದ ಅವರ ಆಡಂಬರದ ಅತಿಥಿ ಸತ್ಕಾರ ಮತ್ತು ಮಿತಿ ಇಲ್ಲದ ಖರ್ಚಿನಿಂದಾಗಿ ಇವರ ಕುಟುಂಬ ಬಡತನಕ್ಕೆ ಒಳಗಾಯಿತು. ಇಂತಹ ಪರಿಸ್ಥಿತಿಯಲ್ಲಿ ಜನಿಸಿದ ಗೋಪಾಲಗೌಡರು ಆರಗದ ಪ್ರಕೃತಿ ಸೌಂದರ್ಯದ ನಡುವೆ ಸಾಮಾನ್ಯ ಹುಡುಗನಾಗಿ ತಮ್ಮ ಬಾಲ್ಯವನ್ನು ಕಳೆದರು. ತಮ್ಮ ಏಳನೇ ವಯಸ್ಸಿನಲ್ಲಿ ಆರಗದ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಣವನ್ನು ಆರಂಭಿಸಿದರು. ತಮ್ಮ ಮಾಧ್ಯಮಿಕ ಶಿಕ್ಷಣವನ್ನು ಆರಗ ಸಮೀಪದ ಅಗ್ರಹಾರ ಸರ್ಕಾರಿ ಮಾಧ್ಯಮಿಕ ಶಾಲೆಯಲ್ಲಿ ಮುಗಿಸಿದರು. ಶಾಲೆಯಲ್ಲಿ ಓದುತ್ತಿರುವಾಗ ಇವರು ಅತ್ಯಂತ ಬುದ್ಧಿವಂತ ಜಾಣ್ಮೆಯ ವಿದ್ಯಾರ್ಥಿಯಾಗಿದ್ದರಲ್ಲದೆ,

ಇತರ ವಿಷಯಗಳಲ್ಲಿಯೂ ಹೆಚ್ಚು ಆಸಕ್ತಿಯನ್ನು ತೋರುತ್ತಿದ್ದರು. ಹೀಗಾಗಿ ಉಪಾಧ್ಯಾಯರ ಅಚ್ಚು ಮೆಚ್ಚಿನ ಶಿಷ್ಯನಾಗಿ ಮಾಧ್ಯಮಿಕ ಶಿಕ್ಷಣವನ್ನು ಮುಗಿಸಿದರು. ಆದರೆ ಮುಂದಿನ ವಿದ್ಯಾಭ್ಯಾಸಕ್ಕೆ ಮನೆಯ ಆರ್ಥಿಕ ದುಸ್ಥಿತಿ ಅಡ್ಡ ಬಂತು. ಇವರ ತಂದೆಗೆ ಎರಡು ಜನ ಮಕ್ಕಳನ್ನು ಓದಿಸುವುದು  ಕಷ್ಟವಾಗಿತ್ತು. ಹೀಗಾಗಿ ಶಾಂತವೇರಿಯವರು ಮುಂದಿನ ವಿದ್ಯಾಭ್ಯಾಸದ ಆಸೆಯನ್ನು ಬಿಟ್ಟು ಮನೆಯ ಕೆಲಸದಲ್ಲಿ ತೊಡಗಬೇಕಾಯಿತು. ಈ ಸಂದರ್ಭದಲ್ಲಿ ಜಮೀನಿನ ಕೆಲಸ, ಜಾನುವಾರುಗಳನ್ನು ಕಾಯುವುದು, ದನದ ಕೊಟ್ಟಿಗೆಗೆ ಸೊಪ್ಪು ತರುವಂತಹ ಎಲ್ಲಾ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ಆದರೂ ಇವರನ್ನು ಓದುವ ಗೀಳು ಕಾಡುತ್ತಿತ್ತು. ಅದೃಷ್ಟವಶಾತ್ ಇದೇ ಸಂದರ್ಭದಲ್ಲಿ ಇವರ ಅಣ್ಣ ಧರ್ಮೇಗೌಡರು ಶಿಕಾರಿಪುರದಲ್ಲಿ ರೆವಿನ್ಯೂ ಇನ್ಸ್‌ಪೆಕ್ಟರ್‌ರಾಗಿ ಕೆಲಸಕ್ಕೆ ಸೇರಿದರು. ಆಗ ಗೋಪಾಲಗೌಡರು ಅಣ್ಣನ ಮನೆಯಲ್ಲಿ ಇದ್ದುಕೊಂಡು 1941 ರಲ್ಲಿ ಶಿಕಾರಿಪುರದಲ್ಲಿ ಲೋಯರ್ ಸೆಕೆಂಡರಿ ಪರೀಕ್ಷೆಯನ್ನು ಕಟ್ಟಿ ಅದರಲ್ಲಿ ಉತ್ತೀರ್ಣರಾದರು.

ತಮ್ಮ ಹೈಸ್ಕೂಲ್ ಶಿಕ್ಷಣಕ್ಕೆ ಪುನಃ ಮನೆಯ ಆರ್ಥಿಕ ಸಂಕಷ್ಟದ ಪರಿಸ್ಥಿತಿ ಎದುರಾಯಿತು. ಆದರೆ ಇವರನ್ನು ಓದುವ ಗೀಳು ಕಾಡುತ್ತಿತ್ತು. ಜೀವನದ ಭವಿಷ್ಯವನ್ನು, ಸುಖ -ಶಾಂತಿಯನ್ನು ಬಡತನ ಕಮರಿಸುತ್ತಿದ್ದ ಸಂದರ್ಭದಲ್ಲಿ ಅನಿರೀಕ್ಷಿತವಾಗಿ  ಇವರ ಬಾಳಿನಲ್ಲಿ  ಬೆಳಕಾಗಿ ಬಂದ ಬಸವರಾಜ ಶಾಸ್ತ್ರಿಗಳು ಕೊಲ್ಲೂರಯ್ಯ ಗೌಡರಿಗೆ ಸಲಹೆ, ಸಹಕಾರ ನೀಡಿ ಅವರಲ್ಲಿ ಧೈರ್ಯ ತುಂಬಿ ಮಗನ ವಿದ್ಯಾಭ್ಯಾಸವನ್ನು ಮುಂದುವರಿಸುವಂತೆ ಒಪ್ಪಿಸಿದರು. ಗೋಪಾಲಗೌಡರ ಭವಿಷ್ಯದ ಗತಿಯನ್ನೇ ಬದಲಾಯಿಸಿದ ಶಾಸ್ತ್ರಿಗಳು ಇವರ ಒಡನಾಡಿಯಾದರು. ಶಾಸ್ತ್ರಿಗಳು ಆಯುರ್ವೇದ ಪಂಡಿತ, ಭವಿಷ್ಯ ಶಾಸ್ತ್ರ ಪ್ರವೀಣ, ಅಲೆಮಾರಿ, ಭೂಗತ ಚಟುವಟಿಕೆಯಲ್ಲಿ ನಿಸ್ಸೀಮ. ಸಾಹಿತ್ಯದಲ್ಲಿ ಅಭಿರುಚಿ, ಸಂಗೀತದಲ್ಲಿ ಜ್ಞಾನಿಯಾಗಿದ್ದು 'ತೋಡಿರಾಗ ' ವನ್ನು ಹಾಡುತ್ತಿದ್ದರು. ಗೌಡರಿಗೂ ಸಂಗೀತದಲ್ಲಿ , ಸಾಹಿತ್ಯ, ಯಕ್ಷಗಾನ ಮುಂತಾದ ವಿಷಯಗಳಲ್ಲಿ ಅತೀವ ಆಸಕ್ತಿ. ಈ ಇಬ್ಬರ ಸಮಾನ ಅಭಿರುಚಿ ಇವರನ್ನು ಸ್ನೇಹಿತರನ್ನಾಗಿ ಬೆಸೆಯಿತು. ಗೌಡರು ಶಾಸ್ತ್ರಿಗಳಿಂದ ಸಂಗೀತದಲ್ಲಿ ವಿಶಿಷ್ಟ ಜ್ಞಾನವನ್ನು ಸಂಪಾದಿಸಿದರು. ಕುಮಾರವ್ಯಾಸ ಭಾರತ, ಜೈಮಿನಿ ಭಾರತ, ಹರಿಶ್ಚಂದ್ರ ಕಾವ್ಯ, ಆಧುನಿಕ ಭಾವಗೀತೆಗಳನ್ನು ಭಾವ ಪರವಶರಾಗಿ ಹಾಡುತ್ತಿದ್ದರು.

ಮತ್ತು ಆ ಮೂಲಕ ಹಳ್ಳಿಗರ ಮನಸ್ಸನ್ನು ಸೂರೆಗೊಳ್ಳುತ್ತಿದ್ದರು. ಇಂತಹ ಸಂಗೀತದ ಅಭಿರುಚಿಯೇ ಮುಂದಿನ ದಿನಗಳಲ್ಲಿ ಕವಿ –ಸಾಹಿತಿ – ಸಂಗೀತಜ್ಞರ ಸ್ನೇಹವನ್ನು ಸಂಪಾದಿಸಲು ಸಹಕಾರಿಯಾಯಿತು. ಹೀಗೆ ಶಾಸ್ತ್ರಿಗಳ ಒಡನಾಟ ಅವರ ಬದುಕಿನ ದಿಕ್ಕನ್ನು ಬದಲಾಯಿಸಿತು. ಶಾಸ್ತ್ರಿಗಳು ಭವಿಷ್ಯಶಾಸ್ತ್ರ ಪ್ರವೀಣರಾಗಿದ್ದರಿಂದ ಗೋಪಾಲಗೌಡರು ಭವಿಷ್ಯದಲ್ಲಿ ಜನಪ್ರಿಯ ನಾಯಕರಾಗುತ್ತಾರೆ. ಅವರಿಗೆ 'ರಾಜಯೋಗ ' ಇದೆ ಎಂಬ ವಿಷಯವನ್ನು ಹಳ್ಳಿಗರಿಗೆ ಸಾರಿ ಹೇಳಿದ್ದರು.

1941 ರಲ್ಲಿ ತೀರ್ಥಹಳ್ಳಿಯ ಸರ್ಕಾರಿ ಶಾಲೆಯಲ್ಲಿ ಹೈಸ್ಕೂಲ್ ಶಿಕ್ಷಣ ಪ್ರಾರಂಭಿಸಿದರು. ಆದರೆ ದಿನಾಲೂ 10 ಕಿ.ಮೀ. ನಡೆದು ಆರಗದಿಂದ ತೀರ್ಥಹಳ್ಳಿಯ ಸ್ಕೂಲಿಗೆ ಹೋಗಬೇಕಾದ ಕಷ್ಟದ ಪರಿಸ್ಥಿತಿ ಇತ್ತು. ಅದೃಷ್ಟವಶಾತ್ ಇವರಿಗೆ 'ಸ್ಕಾಲರ್‌ಶಿಪ್ ' ಮಂಜೂರಾಯಿತು. ಹೀಗಾಗಿ ಇವರು ಒಕ್ಕಲಿಗರ ವಿದ್ಯಾರ್ಥಿ ನಿಲಯ ಸೇರಿಕೊಳ್ಳಲು ಸಾಧ್ಯವಾಯಿತು. ಈ ಸದಾವಕಾಶವನ್ನು ಪೂರ್ಣವಾಗಿ ಬಳಸಿಕೊಂಡ ಗೋಪಾಲಗೌಡರು, ಆಳವಾದ ಅಧ್ಯಯನದಲ್ಲಿ ತೊಡಗಿದರು. ಈ ಸಂದರ್ಭದಲ್ಲಿ ಪಠ್ಯದ ಜೊತೆಗೆ ಇತರ ವಿಷಯಗಳನ್ನು ಆಳವಾಗಿ ಅಭ್ಯಾಸ ಮಾಡುತ್ತಿದ್ದರು. ಇದು ಅವರ ಓದುವ ಹವ್ಯಾಸವನ್ನು ಬೆಳೆಸಿತಲ್ಲದೆ ಅವರ ಜ್ಞಾನದ ಉನ್ನತಿಗೂ ಸಹಕಾರಿ ಯಾಯಿತು. ಈ ಹೈಸ್ಕೂಲ್ ಶಿಕ್ಷಣದ ಸಂದರ್ಭದಲ್ಲಿ ಗೋಪಾಲ ಗೌಡರ ಜೀವನದ ಮೇಲೆ ಗಾಢ ಪ್ರಭಾವ ಬೀರಿದ ಗುರುಗಳೆಂದರೆ ಪಂಡಿತ ಕಮಕೋಡು ನರಸಿಂಹ ಶಾಸ್ತ್ರಿಗಳು. ಈ ಗುರುಗಳ ಸರಳ ನಡೆ, ನುಡಿ, ದೇಶದ ಸ್ವಾತಂತ್ರ್ಯದ ಬಗೆಗಿನ ದಾಹ, ದೇಶ ಪ್ರೇಮ ಇವುಗಳು ಗೌಡರನ್ನು ಆಕರ್ಷಿಸಿದವು. ಹಾಗೆಯೇ ಗೌಡರನ್ನು ಕಂಡರೆ ಗುರುಗಳಿಗೂ ಅಪಾರ ಪ್ರೀತಿ. ಈ ಗುರುಗಳ ಮಾರ್ಗದರ್ಶನ ಮತ್ತು ಪ್ರೀತಿ ವಿಶ್ವಾಸಗಳೇ ಇವರನ್ನು ಯಾವುದೇ ಅನ್ಯಾಯದ ವಿರುದ್ಧದ ಹೋರಾಟಕ್ಕೆ ಅಣಿಗೊಳಿಸಿದವೆನ್ನಬಹುದು. ಇವರು ಹೈಸ್ಕೂಲ್ ಶಿಕ್ಷಣದ ಸಂದರ್ಭ ದಲ್ಲಿಯೇ ಸಾರ್ವಜನಿಕ ಸಮಸ್ಯೆಗಳನ್ನು ಅರ್ಥ ಮಾಡಿಕೊಳ್ಳುವ ಮತ್ತು ಸಮಸ್ಯೆಗಳಿಗೆ ಪರಿಹಾರ ಹುಡುಕುವ ಮನೋಭಾವವನ್ನು ಬೆಳೆಸಿಕೊಂಡಿದ್ದರು. ಇದೇ ಸಂದರ್ಭದಲ್ಲಿ ದೇಶದ ಮೂಲೆ ಮೂಲೆಯಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯದ ಕೆಚ್ಚು, ಗುರುಗಳ ಕಿಡಿ ನುಡಿಗಳು ಗೋಪಾಲಗೌಡರ ಹೋರಾಟದ ಮನೋಭಾವವನ್ನು ಇಮ್ಮಡಿಗೊಳಿಸಿದ್ದವು.

1943-44 ರಲ್ಲಿ ಹೈಸ್ಕೂಲ್ ಶಿಕ್ಷಣ ಮುಗಿಸಿದ ಗೋಪಾಲಗೌಡರು 1944 ರಲ್ಲಿ ಶಿವಮೊಗ್ಗದ ಇಂಟರ್ ಮೀಡಿಯಟ್ ಕಾಲೇಜಿಗೆ ಸೇರಿದರು. ಮುಂದೆ ಓದುವ ಹಂಬಲ, ಆದರೆ ಇವರ ಆರ್ಥಿಕ ದುಸ್ಥಿತಿ ಇವರ ಓದಿಗೆ ತಡೆಯಾಗುತ್ತಿತ್ತು. ಆದರೂ ತಮ್ಮ ವೈಯುಕ್ತಿಕ ಚಲ ಮತ್ತು ಧೈರ್ಯದಿಂದ ಓದಲು ಮುಂದಾದರು. ಕಾಲೇಜು ಶಿಕ್ಷಣ ಕಷ್ಟದ ನಡುವೆ ನಡೆಯುತ್ತಿದ್ದರೂ ಇವರ ನಿರಂತರವಾದ ಅಭ್ಯಾಸ ಮತ್ತು ಇವರ ಸಹಜ ಪ್ರತಿಭೆಯಿಂದ ವಿಕಾಸಗೊಂಡ ಜ್ಞಾನದ ಮಟ್ಟ ಕಾಲೇಜಿನ ಅಧ್ಯಾಪಕರನ್ನೂ ಚಕಿತಗೊಳಿಸುವಂತಿತ್ತು. ಇವರು ಪಠ್ಯದ ವಿಷಯಕ್ಕಿಂತ ಇತರ ವಿಷಯಗಳಲ್ಲಿ ವಿಶಿಷ್ಟ ಆಸಕ್ತಿಯನ್ನು ಹೊಂದಿದ್ದರು. ಈ ಪಠ್ಯೇತರ ವಿಷಯಗಳಲ್ಲಿನ ಆಸಕ್ತಿಗೆ ಆಗಿನ ಶಿವಮೊಗ್ಗ ನಗರದ ಪರಿಸರವೂ ಪ್ರೇರಕವಾಗಿತ್ತು. ಸ್ವಾತಂತ್ರ್ಯದ ಹೋರಾಟಕ್ಕೆ ಸಂಬಂಧಿಸಿದ ಎಲ್ಲಾ ಹೋರಾಟಗಳಲ್ಲಿ ಮುಂಚೂಣಿಯಲ್ಲಿದ್ದ ಶಿವಮೊಗ್ಗದ ರಾಜಕೀಯ ಪರಿಸರ ವಿದ್ಯಾರ್ಥಿ ಗೋಪಾಲಗೌಡರ ಮೇಲೆ ಅಗಾಧ ಪ್ರಭಾವ ಬೀರಿತ್ತು. ಹೀಗಾಗಿ ಇವರು ತಮ್ಮ ವಿದ್ಯಾರ್ಥಿ ಜೀವನದಲ್ಲಿಯೇ ಪ್ರಬುದ್ಧ ರಾಜಕೀಯ ಪ್ರಜ್ಞೆಯನ್ನು ಬೆಳೆಸಿ ಕೊಂಡಿದ್ದರು. ಈ ಮಧ್ಯೆ ಹಣಕಾಸಿನ ಅಡಚಣೆಯಿಂದಾಗಿ ಶಿಕ್ಷಣವನ್ನು ಮೊಟಕುಗೊಳಿಸಿ ಊರಿಗೆ ವಾಪಾಸಾದರು.

ಊರಿನಲ್ಲಿ ಇದ್ದು ದಿನಕಳೆಯುತ್ತಿದ್ದಂತೆ ಆರಗದ ಮಾಧ್ಯಮಿಕ ಶಾಲೆಯ ಅಧ್ಯಾಪಕರಾದ ಟಿ.ವಿಶ್ವನಾಥರಾವ್ ಅವರ ಸಂಪರ್ಕವಾಯಿತು. ಇವರು ಅಧ್ಯಾಪಕ ವೃತ್ತಿಯ ಜೊತೆಗೆ ವೈದ್ಯಕೀಯ ವೃತ್ತಿಯನ್ನು ನಿರ್ವಹಿಸಿ ಜನಪ್ರಿಯರಾಗಿದ್ದರು. ಜೊತೆಗೆ ಕಾರ್ಲ್‌ಮಾರ್ಕ್ಸ್, ಟಾಲ್‌ಸ್ಟಾಯ್, ಜಯಪ್ರಕಾಶ್ ನಾರಾಯಣ ಮುಂತಾದವರ ಕೃತಿಗಳನ್ನು ಆಳವಾಗಿ ಅಧ್ಯಯನ ಮಾಡಿದ್ದರಲ್ಲದೆ ಸಾಹಿತ್ಯ, ಯಕ್ಷಗಾನ ಮತ್ತು ರಾಜಕೀಯದ ಅಭಿರುಚಿಯನ್ನು ಹೊಂದಿದ್ದರು. ಈ ಅಧ್ಯಾಪಕರ ಸಂಪರ್ಕದಿಂದಾಗಿ ಗೋಪಾಲಗೌಡರ ಭವಿಷ್ಯದಲ್ಲಿ ಆಸೆಯೊಂದು ಚಿಗುರೊಡೆಯಲು ಕಾರಣವಾಯಿತು. ಈ ಅಧ್ಯಾಪಕರೇ ಗೋಪಾಲಗೌಡರಿಗೆ ಆರಗದ ಶಾಲೆಯಲ್ಲಿ ಉಪಾಧ್ಯಾಯರ ಕೆಲಸ ಕೊಡಿಸಿದರು. ಗೌಡರು ಈ ಕೆಲಸವನ್ನು ಸಮರ್ಪಕವಾಗಿ ನಿರ್ವಹಿಸುತ್ತಿದ್ದರಲ್ಲದೆ ಸಮಾಜ ಸೇವಾ ಕಾರ್ಯಕರ್ತರಾಗಿ 'ವಯಸ್ಕರ ಶಾಲೆ ' ನಡೆಸುವುದು, ರಾಮಾಯಣ -ಮಹಾಭಾರತ ಮುಂತಾದ ಉದಾತ್ತ ಕೃತಿಗಳನ್ನು ಓದುವುದು, ಹಳ್ಳಿಗರ ಸಣ್ಣ -ಪುಟ್ಟ ವಿವಾದಗಳನ್ನು

ತೀರ್ಮಾನಿಸುವುದು ಈ ಕಾರ್ಯಗಳನ್ನು ಮಾಡುತ್ತಾ ಹಳ್ಳಿಗರೊಂದಿಗೆ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದರು.

ಗೋಪಾಲಗೌಡರ ಹೋರಾಟದ ಬದುಕು 1942 ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸುವುದರ ಮೂಲಕ ಪ್ರಾರಂಭವಾಯಿತು. ಈ ಚಳುವಳಿಯಲ್ಲಿ ಭಾಗವಹಿಸಿ ಪೊಲೀಸರ ಕಣ್ಣಿಗೆ ಬೀಳದೆ ಚಳುವಳಿಯನ್ನು ನಿರ್ದೇಶಿಸುವ ಕಾರ್ಯವನ್ನು ಮಾಡಿದರಲ್ಲದೆ, ವಿಭಿನ್ನ ಭೂಗತ ಚಟುವಟಿಕೆಗಳಲ್ಲಿ ತೊಡಗಿ ಬ್ರಿಟೀಷ್ ಆಡಳಿತಕ್ಕೆ ಅಡಚಣೆ ಉಂಟು ಮಾಡುತ್ತಿದ್ದರು. ಕೊನೆಗೆ ಒಂದು ದಿನ ಪೊಲೀಸರು ಇವರನ್ನು ಬಂದಿಸಿ ನ್ಯಾಯಾಲಯದಲ್ಲಿ ಹಾಜರುಪಡಿಸಿದರು. ಆಗ ತಾವೇ ಸ್ವತಃ ನ್ಯಾಯಾಲಯದಲ್ಲಿ ವಾದಿಸಿ ನ್ಯಾಯಾಧೀಶರನ್ನೇ ಚಕಿತಗೊಳಿಸುವ ರೀತಿಯಲ್ಲಿ ವಾದಿಸಿ ಬಿಡುಗಡೆಯಾದರು. ಹೀಗೆ ಇವರು ಯಾವುದೇ ಕ್ಷೇತ್ರದಲ್ಲೂ ಆಳವಾದ ಜ್ಞಾನವನ್ನು ಹೊಂದಿದ್ದರು ಎಂಬುವುದು ಇದರಿಂದ ತಿಳಿಯುತ್ತದೆ. 1946 ರಲ್ಲಿ ನಂಜನಗೂಡಿನಲ್ಲಿ ನಡೆದ ವಿದ್ಯಾರ್ಥಿ ಕಾಂಗ್ರೆಸ್ಸಿನ ಸಮಾವೇಶದಲ್ಲಿ ವಿದ್ಯಾರ್ಥಿ ನಾಯಕರಾಗಿ ಭಾಗವಹಿಸಿದ್ದರು. ಮತ್ತು ಅಲ್ಲಿ ಅಗ್ರ ಪಾತ್ರ ವಹಿಸುವುದರ ಮೂಲಕ ಕಾಂಗ್ರೆಸ್ ಸೋಷಲಿಸ್ಟ್ ವಿಭಾಗದ ನಾಯಕನಾಗಿ ಹೊರ ಹೊಮ್ಮಿದರು. 1947 ರ ಸ್ವಾತಂತ್ರ್ಯದ ಚಳುವಳಿ, 1942 ರ ಚಳುವಳಿಯಂತೆ ಶಿವಮೊಗ್ಗದಲ್ಲಿ ಬಿರುಸಾಗಿ ನಡೆಯಿತು. ಈ ಚಳುವಳಿಯಲ್ಲಿಯೂ ಗೌಡರು ಅಗ್ರ ಪಾತ್ರ ವಹಿಸಿ ಸ್ಮರಣೀಯ ಹೋರಾಟ ನಡೆಸಿದರು. ತಮ್ಮ ವಾಕ್ ಚಾತುರ್ಯ ಹಾಗೂ ಭೂಗತ ಚಟುವಟಿಕೆಗಳ ಮೂಲಕ ಯುವ ಜನತೆಯನ್ನು ಆಕರ್ಷಿಸುವ ಮತ್ತು ಅವರಲ್ಲಿ ದೇಶಪ್ರೇಮ ಪ್ರಜ್ವಲಿಸುವಂತೆ ಮಾಡುತ್ತಿದ್ದರು.

1947 ಆಗಸ್ಟ್ 15 ರಂದು ಭಾರತ ಪಾರತಂತ್ರದಿಂದ ಬಿಡುಗಡೆ ಹೊಂದಿ ಸ್ವಾತಂತ್ರ್ಯ ಗೊಂಡಿತು. ಈ ಸ್ವಾತಂತ್ರ್ಯೋತ್ಸವದ ಸಂಭ್ರಮದಲ್ಲಿರುವಾಗಲೇ ಸಾಜವಾದಿ ಮನೋಭಾವವುಳ್ಳ ಬಹುತೇಕ ತರುಣರು ಭವ್ಯ ಭಾರತದ ನಿರ್ಮಾಣದ ಸದುದ್ದೇಶದಿಂದ ಕಾಂಗ್ರೆಸ್ ಪಕ್ಷದಿಂದ ಹೊರಬರಲು ನಿರ್ಧರಿಸಿ ಅನೇಕರು ಕಾಂಗ್ರೆಸ್ ಪಕ್ಷಕ್ಕೆ ರಾಜೀನಾಮೆ ನೀಡಿದರು. ರಾಜೀನಾಮೆ ನೀಡಿದವರಲ್ಲಿ ಗೋಪಾಲಗೌಡರೂ ಒಬ್ಬರು. ಕಾಂಗ್ರೆಸ್‌ನಿಂದ ಹೊರಬಂದ ಸಮಾಜವಾದಿಗಳು

1948 ರಲ್ಲಿ ತಮ್ಮದೇ ಆದ ಸಮಾಜವಾದಿ ಪಕ್ಷವನ್ನು ಕಟ್ಟಿಕೊಂಡರು. ಗೋಪಾಲಗೌಡರು ಕರ್ನಾಟಕದ ಸಮಾಜವಾದಿ ಪಕ್ಷದ ಅಗ್ರಗಣ್ಯ ನಾಯಕನಾಗಿ ಕಾರ್ಯನಿರ್ವಹಿಸಿದರು. ಅಂತೆಯೇ ಕರ್ನಾಟಕ ರಾಜ್ಯದ ಸಮಾಜವಾದಿ ಪಕ್ಷದ ಪ್ರಥಮ ಸಮ್ಮೇಳನವನ್ನು ಶಿವಮೊಗ್ಗದಲ್ಲಿ ಆಯೋಜಿಸಿ ಅದನ್ನು ಯಶಸ್ವಿಯಾಗಿ ನಡೆಸಿದರು.

1948 ರಲ್ಲಿ ಬಡವರು, ದೀನದಲಿತರು, ಬಡರೈತರನ್ನು ಒಗ್ಗೂಡಿಸಿ 'ಹಿಂದ್ ಕಿಸಾನ್ ಪಂಚಾಯತ್ ' ಹೆಸರಿನಲ್ಲಿ ಬೃಹತ್ ರೈತ ಸಮ್ಮೇಳನವನ್ನು ತೀರ್ಥಹಳ್ಳಿಯಲ್ಲಿ ಆಯೋಜಿಸಿ ಬಡ ರೈತಾಪಿ ವರ್ಗದವರ, ಕಾರ್ಮಿಕರ ಸಮಸ್ಯೆಗಳನ್ನು ಸರ್ಕಾರದ ಗಮನಕ್ಕೆ ತರುವ ಕಾರ್ಯವನ್ನೂ ಮಾಡುವುದರ ಮೂಲಕ ತಮ್ಮ ಸಾಮರ್ಥ್ಯ ಮತ್ತು ಸಂಘಟನಾ ಚತುರತೆಯನ್ನು ತೋರಿಸಿಕೊಟ್ಟರು. ಇದೇ ಸಂದರ್ಭದಲ್ಲಿ ಬಿಹಾರಕ್ಕೆ ಹೋಗಿ ಅಲ್ಲಿ ನಡೆಯುತ್ತಿದ್ದ ರೈತರ ಹೋರಾಟ, ರೈತರ ಸಂಘಟನೆಗಳನ್ನು ಸ್ವತಃ ಕಣ್ಣಾರೆ ಕಂಡು ಅಧ್ಯಯನ ನಡೆಸಿ ಬಂದರು. ಈ ಎಲ್ಲಾ ಪ್ರಯತ್ನಗಳು 1951 ರಲ್ಲಿ ಕಾಗೋಡಿನಲ್ಲಿ ನಡೆದ ರೈತ ಸತ್ಯಾಗ್ರಹದಲ್ಲಿ ಭಾಗವಹಿಸಲು ಪ್ರೇರಕವಾದವು. ಗೋಪಾಲಗೌಡರು ಸಮಾಜವಾದಿ ಪಕ್ಷದ ನಾಯಕನಾಗಿ ರೈತ ಹೋರಾಟದಲ್ಲಿ ಭಾಗವಹಿಸಿ ಆ ಹೋರಾಟಕ್ಕೆ ಹೊಸ ಚೇತನ ಮತ್ತು ಆಯಾಮವನ್ನು ನೀಡಿ ಆ ಸತ್ಯಾಗ್ರಹದ ಯಶಸ್ಸಿಗೆ ಕಾರಣರಾದರು. ಈ ಹೋರಾಟದ ಸಂದರ್ಭದಲ್ಲಿ ರಾಷ್ಟ್ರ ಮಟ್ಟದ ಸಮಾಜವಾದಿ ನಾಯಕರಾದ ರಾಮಮನೋಹರ ಲೋಹಿಯ ಮತ್ತು ಜಯಪ್ರಕಾಶ್ ನಾರಾಯಣ ಇವರುಗಳನ್ನು ಕಾಗೋಡು ಸತ್ಯಾಗ್ರಹದಲ್ಲಿ ಭಾಗವಹಿಸಲು ಅವರನ್ನು ಕರೆತಂದಿರುವುದು ಇವರ ನಾಯಕತ್ವಕ್ಕೆ ಮತ್ತು ಸಂಘಟನಾ ಚತುರತೆಗೆ ಸಾಕ್ಷಿಯಾಗಿದೆ. ಈ ಹೋರಾಟ ತನ್ನ ತೀವ್ರತೆಯನ್ನು ಕಳೆದುಕೊಂಡು ಅದರ ಶಕ್ತಿ ಕುಂದುತ್ತಿರುವಂತಹ ಸಂದರ್ಭದಲ್ಲಿ ಯುವ ಸಮಾಜವಾದಿ ನಾಯಕನಾಗಿ ಹೋರಾಟದ ನಾಯಕತ್ವ ವಹಿಸಿಕೊಂಡು ಹೋರಾಟಕ್ಕೆ ಪುನಶ್ಚೇತನ ನೀಡಿ ಆ ಹೋರಾಟದ ಸಫಲತೆಗೆ ಪ್ರೇರಕ ಶಕ್ತಿಯಾದರು. ಹೀಗಾಗಿ ಈ ಹೋರಾಟದ ಮೂಲಕ "ಉಳುವವನೇ ಹೊಲದೊಡೆಯ " ಎಂಬ ಘೋಷಣೆಯ ಹರಿಕಾರರಾದರು.

ಐತಿಹಾಸಿಕ ಕಾಗೋಡು ಸತ್ಯಾಗ್ರಹ ಅವರ ವ್ಯಕ್ತಿತ್ವವನ್ನು ರೂಪಿಸಿತು. ಇದರಿಂದ ಹಲವು

ಬಗೆಯ ಹೊಸ ಹೊಸ ಅನುಭವಗಳನ್ನು ತಂದುಕೊಟ್ಟಿತು. ಈ ಸತ್ಯಾಗ್ರಹವೇ ಗೌಡರನ್ನು ಜನನಾಯಕರನ್ನಾಗಿ ರೂಪಿಸಿತಲ್ಲದೆ, ಇವರ ಜನಪ್ರಿಯತೆ ರಾಜ್ಯ, ರಾಷ್ಟ್ರ ಮತ್ತು ಅಂತರ ರಾಷ್ಟ್ರೀಯ ಮಟ್ಟಕ್ಕೇರಲು ಕಾರಣವಾಯಿತು. ಇದರ ಪ್ರಭಾವದಿಂದಾಗಿ ''ಹಿಂದ್ ಕಿಸಾನ್ ಪಂಚಾಯತ್ ''ನ ಕರ್ನಾಟಕ ಶಾಖೆಯ ಅಧ್ಯಕ್ಷರೂ ಆದರು. ಇಂತಹ ಇವರ ಚತುರತೆ, ಸಂಘಟನಾ ಶಕ್ತಿಯಿಂದಾಗಿ ಅಂದು ಬಹಳ ಮಂದಿ ಪ್ರಭಾವಿ ತರುಣರು ಸಮಾಜವಾದದ ಕಡೆಗೆ ಆಕರ್ಷಿತರಾದರು. ಸಮಾಜವಾದ ಗೌಡರ ಬದುಕಿನ ಆದರ್ಶ ಮಂತ್ರವಾಯಿತು. ತಮ್ಮ ಜೀವನದುದ್ದಕ್ಕೂ ಸಮಾಜವಾದಿ ತತ್ವಕ್ಕೆ ಪೂರಕವಾದ ಚಿಂತನೆ ಮತ್ತು ಹೋರಾಟದಲ್ಲಿ ಪಾಲ್ಗೊಂಡು ದೀನದಲಿತರ ಏಳಿಗೆಗಾಗಿ ಸಮಾಜದ ಪ್ರಗತಿಗಾಗಿ ತಮ್ಮ ಜೀವನವನ್ನು ಮುಡುಪಾಗಿಟ್ಟಿದ್ದರು.

ಕೆಂಪು ಮಿಶ್ರಿತ ಕಪ್ಪು ಬಣ್ಣದ ದೃಢಕಾಯ ಶರೀರವುಳ್ಳ ಗೋಪಾಲಗೌಡರು ಭಾವನೆ ನಿಲುವಿಗೆ ತಕ್ಕಂತೆ ಎತ್ತರದ ಗಂಭೀರ ಬಾಹ್ಯ ವ್ಯಕ್ತಿತ್ವವನ್ನು ಹೊಂದಿದ್ದರು. ವಿಶಾಲವಾದ ಹಣೆ, ಬಹುತೇಕ ಬೋಳಾಗಿರುವ ಎಲ್ಲೋ ಒಂದೊಂದು ಕೂದಲನ್ನು ಹೊಂದಿದ್ದ ತಲೆ, ವಿಶಾಲವಾದ ಎದೆ, ನೀಳವಾದ ಕೈಗಳಿಂದ ಕೂಡಿದ ಗಟ್ಟಿಮುಟ್ಟಾದ ಕಟ್ಟಾಳು. ಒಮ್ಮೆ ನೋಡಿದರೆ ಇನ್ನೊಮ್ಮೆ ನೋಡಬೇಕೆನಿಸುವ ಆಕರ್ಷಕ ನಿಲುವು. ಇದಕ್ಕೆ ಸರಿ ಹೊಂದುವ ಶುಭ್ರವಾದ ಬಿಳಿಯ ಖಾದಿ ಜುಬ್ಬ, ಅಚ್ಚುಕಟ್ಟಾಗಿ ತಿದ್ದಿ ತೀಡಿದ ಕಚ್ಚೆ ಪಂಚೆಯನ್ನು ಧರಿಸುತ್ತಿದ್ದರು. ಧೀರೋದಾತ್ತ ನಡೆ, ನಿರ್ಭಯ ನುಡಿ, ಉತ್ಕೃಷ್ಟ ವಿದ್ವತ್ತಿನಿಂದ ಕೂಡಿದ ವಿನಯವಂತಿಕೆ. ಈ ರೀತಿಯ ಚಾರಿತ್ರ್ಯವನ್ನು ಹೊಂದಿದ ಗೋಪಾಲಗೌಡರು ಬಡತನ, ಜನಸೇವೆ, ರಾಜಕೀಯದಲ್ಲಿ ಸಿಲುಕಿಕೊಂಡು ದೀರ್ಘ ಕಾಲ ಬ್ರಹ್ಮಚಾರಿಯಾಗಿದ್ದು, 1964 ರಲ್ಲಿ ಧಾರವಾಡದ ಲಿಂಗನಗೌಡ ಪಾಟೀಲರ ಮಗಳು ಸೋನಕ್ಕ ಇವರೊಂದಿಗೆ ಸಮಾಜವಾದಿ ತತ್ವಕ್ಕನುಸಾರವಾಗಿ ಸರಳ ರಿಜಿಸ್ಟರ್ಡ್ ವಿವಾಹವಾದರು. ತಮ್ಮ 41ನೇ ವಯಸ್ಸಿನಲ್ಲಿ ಸಾಂಸಾರಿಕ ಜೀವನ ಆರಂಭಿಸಿದ ಇವರಿಗೆ 1967 ಮಾರ್ಚ್‌ನಲ್ಲಿ ಮಗಳು ಇಳಾಗೀತಾ 1968 ರ ಏಪ್ರಿಲ್‌ನಲ್ಲಿ ಮಗ ರಾಮಮನೋಹರ ಜನಿಸಿದರು. ತಮ್ಮ ದಾಂಪತ್ಯ ಜೀವನಕ್ಕೆ ಕಾಲಿಟ್ಟ ಮೇಲೆಯೂ ಇವರು ತಮ್ಮ ರಾಜಕೀಯ ಮತ್ತು ಸಮಾಜ ಸೇವಾ ಕಾರ್ಯಗಳನ್ನು ಕಡೆಗಣಿಸದೆ ನಿರಂತರ ಸೇವೆಯಲ್ಲಿ ತೊಡಗಿದ್ದರು.

ಗೋಪಾಲಗೌಡರು ಮೊದಲು ಮಾಂಸಾಹಾರವನ್ನು ಸೇವಿಸುತ್ತಿದ್ದರಾದರೂ, ತಮ್ಮ ಚಿಕ್ಕ ವಯಸ್ಸಿನಲ್ಲಿಯೇ ಮಾಂಸಾಹಾರವನ್ನು ಬಿಟ್ಟು ಸಸ್ಯಹಾರಿಯಾದರು. ನಂತರದಲ್ಲಿ ಯಾವತ್ತೂ ಮಾಂಸಾಹಾರವನ್ನು ಸೇವಿಸುತ್ತಿರಲಿಲ್ಲ. ಇವರು ಜಾತಿ ವ್ಯವಸ್ಥೆಯನ್ನು ವಿರೋಧಿಸುತ್ತಿದ್ದ ಕಾರಣ ಯಾರ ಮನೆಯಲ್ಲಾದರೂ ಉಳಿದುಕೊಳ್ಳುತ್ತಿದ್ದರು ಮತ್ತು ಊಟ ಉಪಹಾರವನ್ನು ಮಾಡುತ್ತಿದ್ದರು. ಜಾತಿ ನಿರ್ಮೂಲನೆಗೆ ಸಹಭೋಜನ ಒಂದು ಸಾಧನವಾಗಬಹುದೆಂದು ಆಶಿಸಿದ್ದರು. ಇವರು ನಿರಂತರವಾಗಿ ಬಡವರ, ದೀನದಲಿತರ, ಶೋಷಿತರ ಪರವಾಗಿ ಹೋರಾಡುತ್ತಿದ್ದರಲ್ಲದೆ, ಅವರ ಸಂಕಷ್ಟವನ್ನು ನೋಡಿ ಮರುಕಪಡುವ ಕರುಣಾಮಯಿ ಮಾನವತಾವಾದಿಯಾಗಿದ್ದರು. ಇಂತಹ ಉದಾತ್ತ ವ್ಯಕ್ತಿತ್ವ, ಸರಳತೆ, ಸಜ್ಜನಿಕೆ, ಪ್ರಾಮಾಣಿಕತೆ ಗಳನ್ನು ಮೈಗೂಡಿಸಿಕೊಂಡ ಗೋಪಾಲಗೌಡರು ಕೆಲವು ದೌರ್ಬಲ್ಯಗಳನ್ನು ಹೊಂದಿದ್ದರು ಎಂಬುದನ್ನು ನೆನಪಿಸಿಕೊಳ್ಳಬೇಕಾಗುತ್ತದೆ. ಇವರು ನಿರಂತರವಾಗಿ ಸಿಗರೇಟ್ ಸೇದುವ ಚಟಕ್ಕೆ ಬಲಿಯಾಗಿದ್ದರಲ್ಲದೆ, ಕೆಲವೊಮ್ಮೆ ಪಾನಮತ್ತರಾಗುತ್ತಿದ್ದರು ಎಂಬುದಕ್ಕೂ ಪುರಾವೆಗಳಿವೆ. ಅಂದರೆ ಕುಡಿತದ ಚಟಕ್ಕೂ ಒಳಗಾಗಿದ್ದರು ಎಂಬುದು ತಿಳಿದುಬರುತ್ತದೆ. ಅಲ್ಲದೆ ಇವರ ಇನ್ನೊಂದು ದೌರ್ಬಲ್ಯ ಎಂದರೆ ಸ್ವಲ್ಪ ಆಲಸ್ಯದ ಸ್ವಭಾವ ಇತ್ತು ಎನ್ನಬಹುದು. ಉದಾಹರಣೆಗೆ ಎಂತಹ ಸಂದರ್ಭದಲ್ಲಿಯೂ ಅವರು ಬೆಳಿಗ್ಗೆ ಹಾಸಿಗೆಯಿಂದ ಏಳುವುದು ಎಂಟುಗಂಟೆಯ ನಂತರವೇ ಆದರೂ ಇವರ ಈ ಕೆಲವು ಅವಗುಣಗಳು ವೈಯಕ್ತಿಕ ಬದುಕಿನಲ್ಲಿ ಆಚರನೆಯಲ್ಲಿರುತ್ತಿದ್ದವೇ ಹೊರತು ಸಾರ್ವಜನಿಕರಿಗೆ ತೊಂದರೆ ಕೊಡುವ ಸ್ಥಿತಿಯಲ್ಲಿರಲಿಲ್ಲವೆಂಬುದನ್ನು ಗಮನಿಸಬಹುದು.

ತಮ್ಮ ನಿರಂತರ ಹೋರಾಟ ಮತ್ತು ಪರಿಸ್ರಮದಿಂದಾಗಿ ಹೊತ್ತಿಗೆ ಸರಿಯಾಗಿ ಊಟ - ನಿದ್ರೆಗಳಿಲ್ಲದೆ ಇದ್ದದು, ಕುಡಿತ ಮತ್ತು ಸಿಗರೇಟಿನ ಚಟಕ್ಕೆ ಒಳಗಾಗಿರುವುದು ಮತ್ತು ತಮ್ಮ ಆರೋಗ್ಯದ ಕಡೆಗೆ ಹೆಚ್ಚು ಗಮನ ನೀಡದೇ ಇದ್ದ ಪರಿಣಾಮ ಕ್ರಮೇಣ ಅನಾರೋಗ್ಯಕ್ಕೊಳ ಗಾದರು. ತಮ್ಮ ಜೀವನದ ಅಂತಿಮ ದಿನಗಳಲ್ಲಿ ಹದಗೆಟ್ಟ ಆರೋಗ್ಯದಿಂದ ನರಳಿದ ಪ್ರಾಮಾಣಿಕ ಸಮಾಜವಾದಿ ಕಾರ್ಯಕರ್ತ, ಧೀಮಂತ ಸಮಾಜವಾದಿ ನಾಯಕರಾದ ಗೋಪಾಲಗೌಡರು 1972 ಜೂನ್ 9 ರಂದು ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಕೊನೆ ಉಸಿರೆಳೆದರು. ತಮ್ಮ ಜೀವನವನ್ನು ಸಮಾಜವಾದಕ್ಕೆ ಅರ್ಪಿಸಿದರು. ಅಂದಿನಿಂದೀಚೆಗೆ ಕರ್ನಾಟಕದ ಸಮಾಜವಾದ ಸ್ವಾಸ್ಥ್ಯ ಕೆಟ್ಟು ಬಡವಾಗುತ್ತಾ ಸಾಗಿರುವುದನ್ನು ಕಾಣುತ್ತಿದ್ದೇವೆ.

ಅಧ್ಯಾಯ -4

# ಗೋಪಾಲಗೌಡರ ಸಮಾಜವಾದಿ ತತ್ವದ ಪರಿಚಯ -ಪ್ರಭಾವ

ಸಮಾಜವಾದ ಹೆಚ್ಚು ಪ್ರಚಲಿತವಾಗಿರುವುದು 19ನೇ ಶತಮಾನದಿಂದ ಈಚೆಗಾದರೂ ಇದರ ಮೂಲವನ್ನು ಪ್ರಾಚೀನ ಗ್ರೀಕ್ ತತ್ವಜ್ಞಾನಿ ಪ್ಲೇಟೋವಿನ 'ರಿಪಬ್ಲಿಕ್ ' ಗ್ರಂಥದಲ್ಲಿ ನೋಡಬಹುದು. ಆತ ಆಡಳಿತ ನಡೆಸುವವರು ಮತ್ತು ದೇಶ ರಕ್ಷಣೆ ಮಾಡುವವರು ಖಾಸಗೀ ಆಸ್ತಿ ಮತ್ತು ಸ್ವಂತ ಕುಟುಂಬವನ್ನು ಹೊಂದಬಾರದು. ಏಕೆಂದರೆ ಆಸ್ತಿ ಮತ್ತು ಕುಟುಂಬಗಳನ್ನು ಹೊಂದಿದ್ದರೆ ದೇಶ ಆಳುವವರು ರಾಜ್ಯಾಧಿಕಾರವನ್ನು ತಮ್ಮ ಸ್ವಾರ್ಥಕ್ಕೆ ಬಳಸಿಕೊಳ್ಳುತ್ತಾರೆ. ಆಗ ಇದು ದೇಶದ ಪ್ರಗತಿಗೆ ತಡೆಯಾಗುತ್ತದೆ. ಇದರಿಂದ ಸಾಮಾನ್ಯ ಜನತೆಗೆ ತೊಂದರೆಯಾಗುತ್ತದೆ ಎಂಬುದನ್ನು ಪ್ರತಿಪಾದಿಸುತ್ತ ಆಸ್ತಿ ಮತ್ತು ಪತ್ನಿಯರ ಸಮತಾವಾದವನ್ನು ಪ್ರತಿಪಾದಿಸಿದ್ದರು. ಆನಂತರದ ದಿನಗಳಲ್ಲಿ ಯೂರೋಪಿಯನ್ ದೇಶಗಳಲ್ಲಿ ಸಮಾಜವಾದದ ಚಿಂತನೆಗಳು ನಡೆದಿವೆ. ಮಧ್ಯಕಾಲೀನ ಯುಗದಲ್ಲಿ ಕ್ರೈಸ್ತ ಸನ್ಯಾಸಿಗಳ ಉಪದೇಶದಿಂದ ಈ ಸಿದ್ಧಾಂತದ ಕೆಲವು ಭಾವನೆಗಳು ಬೆಳಕಿಗೆ ಬಂದಿರುವುದನ್ನು ನೋಡಬಹುದು. ಆದರೆ 19ನೇ ಶತಮಾನದಲ್ಲಿ ಸಮಾಜವಾದ ಸಿದ್ಧಾಂತ ವ್ಯಾಪಕವಾಗಿ ಹರಡಲಾರಂಭಿಸಿತು. ಈ ಶತಮಾನದಲ್ಲಿ ವ್ಯಕ್ತಿವಾದ ಮತ್ತು ಔದ್ಯೋಗಿಕ ಕ್ರಾಂತಿಯಿಂದ ಉದ್ಭವಿಸಿದ ದುಷ್ಪರಿಣಾಮಗಳಿಂದಾಗಿ ಸಾಮಾನ್ಯ ಜನತೆ ಜೀವನ ನಡೆಸುವುದೇ ಕಷ್ಟವಾಗಿತ್ತು. ಅಸಮಾನತೆ ಮತ್ತು ಶೋಷಣೆ ಮಿತಿ ಮೀರಿ ಬೆಳೆಯ ಲಾರಂಭಿಸಿತ್ತು. ಆದ್ದರಿಂದ ಇದಕ್ಕೆ ವಿರುದ್ಧವಾಗಿ ಹುಟ್ಟಿಕೊಂಡ ಚಿಂತನೆಗಳ ಪರಿಣಾಮವಾಗಿ ಸಮಾಜವಾದ ಬೆಳಕಿಗೆ ಬರಲು ಅವಕಾಶವಾಯಿತು.

ಸಮಾಜವಾದ ಎಂಬ ಪದವನ್ನು ಮೊದಲ ಬಾರಿಗೆ ಲಿಖಿತ ರೂಪದಲ್ಲಿ ಬಳಸಿದವರು ಒವನ್ ಎಂಬ ಸಮಾಜವಾದಿ ಚಿಂತಕ. ಈತ Co- operative ಎಂಬ ಸಂಚಿಕೆಯಲ್ಲಿ (1835) Socialism ಎಂಬ ಪದವನ್ನು ಬಳಸಿದ. Social ಎಂಬ ಪದದಿಂದ Socialism ಎಂಬ ಪದ ಬಂದಿದ್ದು , Social ಎಂದರೆ ಇತರರೊಂದಿಗೆ ಬೆರೆಯುವುದು. ಅಂದರೆ ವ್ಯಕ್ತಿಗಿಂತ ಸಮಾಜಕ್ಕೆ ಪ್ರಾಮುಖ್ಯತೆ ನೀಡುವುದು ಎಂದರ್ಥ. ಇದನ್ನೇ ಸಮಾಜವಾದದ ಮುಖ್ಯ ತತ್ವ ಎನ್ನಬಹುದು.

19 ನೇ ಶತಮಾನದ ಮೊದಲ ಭಾಗದಲ್ಲಿ ಯೂರೋಪಿನಾದ್ಯಂತ ಬಹಳಷ್ಟು ಜನ ಸಮಾಜವಾದಿ ಚಿಂತಕರು ಸಮಾಜವಾದಿ ತತ್ವಗಳನ್ನು ಪ್ರತಿಪಾದಿಸಿದ್ದರು. ಆದರೆ ಈ ತತ್ವಗಳೆಲ್ಲ ಆಚರಣೆಗೆ ತರಲು ಸಾಧ್ಯವಿಲ್ಲದ, ವಾಸ್ತವಕ್ಕೆ ದೂರವಾದ ತತ್ವಗಳಾಗಿದ್ದವು. ಆದ್ದರಿಂದ ಈ ತತ್ವಗಳನ್ನು ಕೆಲವರು 'Utopian Socialism' ಎಂದು ಕರೆದಿರುವುದು. ಹೀಗಾಗಿಯೇ ಅದುವರೆಗಿನ ಸಮಾಜವಾದವನ್ನು ಫೇಬಿಯನ್ ಸಮಾಜವಾದ, ಕಾರ್ಮಿಕ ಸಂಘ ಪದ್ಧತಿಯ ಸಮಾಜವಾದ, ಸಂಘ ಸಮಾಜವಾದ ಎಂಬ ಬೇರೆ ಬೇರೆ ಹೆಸರಿನಿಂದ ಕರೆಯಲಾಗುತ್ತಿತ್ತು. ಹೀಗಾಗಿ ಸಮಾಜವಾದಕ್ಕೆ ಒಂದು ನಿರ್ದಿಷ್ಟ ರೂಪವಿರಲಿಲ್ಲ. ಆದರೆ ಅನಂತರದಲ್ಲಿ ಬಂದ ಕಾರ್ಲ್‌ಮಾರ್ಕ್ಸ್ ಈ ಸಮಾಜವಾದಿ ತತ್ವಗಳಿಗೆ ಒಂದು ನಿರ್ದಿಷ್ಟ ವೈಜ್ಞಾನಿಕ ಸಿದ್ಧಾಂತದ ರೂಪ ಕೊಟ್ಟು ಹೊಸ ಬಗೆಯಲ್ಲಿ ರೂಪಿಸಿದನು. ಆತನ ಸಿದ್ಧಾಂತವನ್ನು ವೈಜ್ಞಾನಿಕ ಸಮಾಜವಾದ, ಸಮತಾವಾದ, ಮಾರ್ಕ್ಸ್‌ವಾದವೆಂದು ಪರಿಚಯಿಸಲಾಗಿದೆ.

ಪ್ರಜಾಸತ್ತಾತ್ಮಕ ಸಮಾಜವಾದ ಬೆಳವಣಿಗೆಯಾದದ್ದು ಇಂಗ್ಲೆಂಡ್ ದೇಶದಲ್ಲಿ. ಸರ್ ಥಾಮಸ್ ಮೋರ್, ಸೈಂಟ್ ಸೈಮನ್, ಚಾರ್ಲ್ಸ್ ಫೌರಿಯರ್, ಜಿ.ಡಿ.ಹೆಚ್.ಕೋಲ್, ಕ್ಲೇಮೆಂಟ್ ಆಟ್ಲೆ ಮೊದಲಾದವರು ಪ್ರಜಾಸತ್ತಾತ್ಮಕ ಆಧುನಿಕ ಸಮಾಜವಾದವನ್ನು ಬೆಳಕಿಗೆ ತಂದರು. ಈ ಸಮಾಜವಾದದ ಸ್ವರೂಪ ದೇಶದಿಂದ ದೇಶಕ್ಕೆ ಭಿನ್ನವಾಗಿರುವುದನ್ನು ನೋಡ ಬಹುದು. ಇಂಗ್ಲೆಂಡ್, ಫ್ರಾನ್ಸ್ , ಇಟಲಿ, ಅಮೇರಿಕಗಳಲ್ಲಿ ಸಮಾಜವಾದದ ಚಿಂತನೆಗಳು ನಡೆದಿದ್ದರೂ ಆ ಎಲ್ಲಾ ದೇಶಗಳಲ್ಲಿನ ಚಿಂತನೆಗಳು ಏಕರೂಪವಾಗಿರಲಿಲ್ಲ. ಕೆಲವು ಗುಂಪುಗಳು ಸಾಮಾಜಿಕ ಪ್ರಶ್ನೆಗಳಿಗೆ ಮತ್ತು ಸಾಮಾಜಿಕ ಸಮಸ್ಯೆಗಳಿಗೆ ಮಹತ್ವ ನೀಡಿದರೆ ಕೆಲವು ಗುಂಪುಗಳು ಕೈಗಾರಿಕೆ, ವ್ಯಾಪಾರ, ವಾಣಿಜ್ಯ ಸಮಸ್ಯೆಗಳಿಗೆ ಮಹತ್ವ ನೀಡಿವೆ. ಇನ್ನೂ ಕೆಲವು ಗುಂಪುಗಳು ಆರ್ಥಿಕ, ರಾಜಕೀಯ ಅಂಶಗಳಿಗೆ ಮಹತ್ವ ನೀಡಿವೆ. ಆದ್ದರಿಂದಲೇ ಸಮಾಜವಾದವನ್ನು ಇದುವರೆಗೆ ನಿರ್ದಿಷ್ಟವಾಗಿ ಒಂದೆರಡು ಪದ ಅಥವಾ ವಾಕ್ಯದಲ್ಲಿ ವಿವರಿಸುವುದು ಸಾಧ್ಯವಾಗಿಲ್ಲ. ಈ ಅಂಶವನ್ನು ಪರಿಗಣಿಸಿ ಇ.ಎಂ. ಜೋಡ್ ಎಂಬ ಚಿಂತಕ ಸಮಾಜವಾದವನ್ನು ಕುರಿತು ಹೀಗೆ ಹೇಳಿದ್ದಾರೆ. " Socialism is like a hat, which has lost its shape, because everyone wears it ".

ಜೆ.ಡಿ. ಹೆಚ್. ಕೋಲ್ ಇವರು ಸಮಾಜವಾದವನ್ನು ಹೀಗೆ ಅರ್ಥೈಸಿದ್ದಾರೆ. ಸಮಾಜವಾದ ಎಂದರೆ ಈ ನಾಲ್ಕು ಅಂಶಗಳು ಸಂಯೋಗವಾಗಿರುತ್ತವೆ. ''ವರ್ಗ ಭೇದಕ್ಕೆ ಎಡೆ ಮಾಡಿಕೊಡದೆ ಮಾನವ ಸಹಭಾಗಿತ್ವ, ಸಮಾನತ್ವ ತತ್ವದ ಮೇಲೆ ರೂಪಿತವಾದ ಸಮಾಜ ವ್ಯವಸ್ಥೆ ಉತ್ಪಾದನಾ ಸಾಧನಗಳ ಮೇಲೆ ಸಾಮೂಹಿಕ ಹತೋಟಿ ಮತ್ತು ನಾಗರೀಕರಲ್ಲಿ ಪರಸ್ಪರ ಸಹಕಾರ ಮನೋಭಾವ.

ಪ್ರೊ॥ ಪಿಗೂ ಪ್ರಕಾರ ಸಮಾಜವಾದ ಎಂದರೆ, 'ಉತ್ಪಾದನಾ ಸಾಧನಗಳ ಮೇಲೆ ವ್ಯಕ್ತಿಯ ಹತೋಟಿ ಇದ್ದರೆ ಅದು ಬಂಡವಾಳಶಾಹಿ ಪದ್ಧತಿ, ಸಮಾಜದ ಹತೋಟಿ ಇದ್ದರೆ ಅದು ಸಮಾಜವಾದ ಪದ್ಧತಿ.

ಸಾಮಾನ್ಯ ಅರ್ಥದಲ್ಲಿ ಸಮಾಜವಾದವನ್ನು ಹೀಗೆ ಅರ್ಥೈಸಲಾಗಿದೆ. ''ವ್ಯಕ್ತಿಗಿಂತ ಸಮಾಜಕ್ಕೆ ಪ್ರಾಮುಖ್ಯವನ್ನು ಕೊಡುವುದು, ವ್ಯಕ್ತಿಗಳ ಹಿತಸಾಧನೆಯನ್ನು ಸಾರ್ವಜನಿಕ ಹಿತಸಾಧನೆಯ ಅಧೀನತೆಗೆ ಒಳಪಡಿಸುವುದು. ಆರ್ಥಿಕ, ರಾಜಕೀಯ, ಸಾಮಾಜಿಕ ಸಮಾನತ್ವನ್ನು ಸಾಧಿಸುವುದು, ಖಾಸಗೀ ಆಸ್ತಿ, ಜಮೀನ್ದಾರಿ ಪದ್ಧತಿ, ಬಂಡವಾಳಶಾಹಿ ಪದ್ಧತಿ, ಕಾರ್ಖಾನೆಗಳ ಖಾಸಗಿ ಒಡೆತನ, ಪೈಪೋಟಿ ಇವುಗಳನ್ನು ರದ್ದುಗೊಳಿಸಿ ಕೈಗಾರಿಕೆಗಳನ್ನು ರಾಷ್ಟ್ರೀಕರಿಸಿ ಸಹಕಾರ ಪದ್ಧತಿಯನ್ನು ರೂಢಿಗೆ ತರುವುದು ''. ಇಂತಹ ಉದ್ದೇಶಗಳನ್ನು ಹೊಂದಿರುವ ಸಿದ್ಧಾಂತಕ್ಕೆ ಸಮಾಜವಾದವೆಂದು ಹೇಳಬಹುದು. ಇದು ಒಂದು ಆರ್ಥಿಕ, ಸಾಮಾಜಿಕ ಸಿದ್ಧಾಂತ ಮಾತ್ರ ಆಗಿರದೆ ಸಮಾಜದ ಸ್ಥಿತಿಗತಿಗಳನ್ನು ಮಾರ್ಪಡಿಸಿ ಹೊಸ ಸಮಾಜವನ್ನು ನಿರ್ಮಿಸಬಲ್ಲ ಸಾಧನೋಪಾಯ ಎಂದು ಪರಿಗಣಿಸಲಾಗಿದೆ.

ಈ ರೀತಿಯ ಧ್ಯೇಯೋದ್ದೇಶಗಳನ್ನು ಹೊಂದಿರುವ ಪ್ರಜಾಸತ್ತಾತ್ಮಕ ಸಮಾಜವಾದವನ್ನು ಬಹಳಷ್ಟು ಪ್ರಜಾಸತ್ತಾತ್ಮಕ ರಾಷ್ಟ್ರಗಳು ಆಚರಣೆಗೆ ತಂದಿವೆ. ಜನತಾ ಕಲ್ಯಾಣದ ಗುರಿಯನ್ನು ಹೊಂದಿ ಅನ್ಯಾಯ ಮತ್ತು ಶೋಷಣೆಯಿಂದ ಮುಕ್ತವಾದ ಸಮಾಜದ ನಿರ್ಮಾಣಕ್ಕೆ ಇಂದಿನ ರಾಜ್ಯಗಳು ಪ್ರಯತ್ನಿಸುತ್ತಿವೆ. ಆದರೆ ಚೀನಾ, ರಷ್ಯಾದಂತಹ ಕೆಲವು ರಾಷ್ಟ್ರಗಳು ವೈಜ್ಞಾನಿಕ

ಸಮಾಜವಾದ ಎಂಬ ಸಮತಾವಾದ ತತ್ವವನ್ನು ಆಚರಣೆಗೆ ತಂದಿವೆ. ಆದರೂ ಇತ್ತೀಚಿನ ದಿನಗಳಲ್ಲಿ ಆ ರಾಷ್ಟ್ರಗಳೂ ಸಹ ಪ್ರಜಾಸತ್ತಾತ್ಮಕ ಅಂಶಗಳನ್ನು ತಮ್ಮ ಸಮತಾವಾದ ತತ್ವದ ಜೊತೆ ಜೊತೆಯಲ್ಲಿಯೇ ಬಳಕೆಗೆ ತರುತ್ತಿರುವುದನ್ನು ನೋಡಬಹುದಾಗಿದೆ.

ಭಾರತದಲ್ಲಿ ಹಿಂದಿನಿಂದಲೂ ಪ್ರಜಾಸತ್ತಾತ್ಮಕ ಸಮಾಜವಾದಿ ಚಿಂತನೆಗಳು, ಆಚರಣೆಗಳು ಅಸ್ತಿತ್ವದಲ್ಲಿರುವುದನ್ನು ಇತಿಹಾಸದಿಂದ ತಿಳಿಯಬಹುದಾಗಿದೆ. ಫ್ರಾನ್ಸಿನ ಮಹಾಕ್ರಾಂತಿ, ರಷ್ಯಾದ ಕ್ರಾಂತಿ, ಚೀನಾ ದೇಶದಲ್ಲಿ ನಡೆದ ಹೋರಾಟಗಳಿಂದ ಪ್ರಭಾವಿತರಾದ ಭಾರತದಲ್ಲಿನ ಚಿಂತಕರು, ಹೋರಾಟಗಾರರು ಭಾರತದಲ್ಲಿಯೂ ಸಮಾಜವಾದವನ್ನು ಬಳಕೆಗೆ ತರಲು ಒತ್ತಾಯಿಸಿದ್ದರು. ಭಾರತಕ್ಕೆ ಸ್ವಾತಂತ್ರ್ಯವನ್ನು ಪಡೆಯುವ ಹೋರಾಟದ ಸಂದರ್ಭದಲ್ಲಿಯೇ ಸಾಮ್ರಾಜ್ಯಶಾಹಿತ್ವ ಬಂಡವಾಳಶಾಹಿತ್ವ, ಅಸಮಾನತೆಗಳ ವಿರುದ್ಧ ಹೋರಾಟಗಳು ನಡೆದಿರುವುದನ್ನು ನೋಡಬಹುದಾಗಿದೆ. ಗಾಂಧೀಜಿ, ಲೋಹಿಯ, ಜಯಪ್ರಕಾಶ್ ನಾರಾಯಣ್, ಅಂಬೇಡ್ಕರ್ ಮೊದಲಾದವರು ಸಂಪತ್ತು ಮತ್ತು ಅಧಿಕಾರದ ವಿಕೇಂದ್ರೀಕರಣದ ಮೂಲಕ ಸಮಾಜದ ಆಮೂಲಾಗ್ರ ಬದಲಾವಣೆ ಕುರಿತು ಚಿಂತಿಸಿದ್ದರು ಮತ್ತು ಹೋರಾಡಿದ್ದರು. ಇದರ ಪರಿಣಾಮ ವಾಗಿಯೇ ಭಾರತದ ಸಂವಿಧಾನದಲ್ಲಿ ಅನೇಕ ಸಮಾಜವಾದಿ ತತ್ವಗಳು ಅಡಕವಾಗಿರುವುದನ್ನು ನೋಡಬಹುದು. ಅಲ್ಲದೆ ಸಂವಿಧಾನದ ಪ್ರಸ್ತಾವನೆಯಲ್ಲಿಯೇ ಭಾರತ ಸಮಾಜವಾದಿ ಸಮಾಜದ ನಿರ್ಮಾಣದ ಗುರಿ ಹೊಂದಿದೆ ಎಂಬುದನ್ನು ಹೇಳಲಾಗಿದೆ. ಆದರೆ ಭಾರತದಲ್ಲಿ ಸಮಾಜವಾದ ತತ್ವಗಳು ವ್ಯಾಪಕವಾಗಿ ಆಚರಣೆಗೆ ಬರದೆ ಸಮಾಜವಾದಿ ಸಮಾಜದ ನಿರ್ಮಾಣದ ಗುರಿ ಕೇವಲ ಕನಸಾಗಿಯೇ ಉಳಿದಿದೆ. ನಮ್ಮ ಸಂವಿಧಾನದಲ್ಲಿ ಸಮಾಜವಾದವನ್ನು ಅಸ್ತಿತ್ವಕ್ಕೆ ತರಬೇಕು ಎನ್ನುವ ಅಂಶವನ್ನು ಸೂಚಿಸಿದ್ದಾಗಲೂ ಇಲ್ಲಿ ಅಧಿಕಾರದ ಮತ್ತು ಸಂಪತ್ತಿನ ಕೇಂದ್ರೀಕರಣ ಆಗುತ್ತಿರುವುದು ಹಳ್ಳಿಗಳಿಂದ ಕೂಡಿದ ಭಾರತಕ್ಕೆ ಒಂದು ದೊಡ್ಡ ದುರಂತವಾಗಿ ಪರಿಣಮಿಸಿದೆ. ಆದಾಗ್ಯೂ ಭಾರತದ ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಯಲ್ಲಿ ಸಮಾಜವಾದಿ ತತ್ವಗಳನ್ನು ಆಚರಣೆಗೆ ತರುವ ಪ್ರಯತ್ನಗಳು ನಡೆಯುತ್ತಿವೆ. ಈ ರೀತಿಯ ಸಮಾಜವಾದಿ ತತ್ವಗಳನ್ನು ಆಚರಣೆಗೆ ತರಲು ಪ್ರಯತ್ನಿಸಿದ ಹಲವಾರು ಸಮಾಜವಾದಿ ಚಿಂತಕರು ಮತ್ತು ಹೋರಾಟಗಾರರಲ್ಲಿ ಗೋಪಾಲಗೌಡರು ಒಬ್ಬರು.

ಶ್ರೀ ಶಾಂತವೇರಿ ಗೋಪಾಲಗೌಡರ ಮೇಲೆ ಸಮಾಜವಾದ ಹೇಗೆ ಪ್ರಭಾವ ಬೀರಿತು ಮತ್ತು ಆ ತತ್ವದ ಪ್ರಭಾವಕ್ಕೆ ಹೇಗೆ ಒಳಗಾದರು ಎಂಬುದನ್ನು ನೋಡುತ್ತಾ ಹೋದರೆ ಪ್ರಥಮವಾಗಿ ಅವರು ಹುಟ್ಟಿದ ಪರಿಸರವೇ ಇವರನ್ನು ಸ್ವಾಭಾವಿಕವಾಗಿ ಸಮಾಜವಾದದ ಕುರಿತು ಚಿಂತಿಸಲು ಪ್ರೇರೇಪಿಸಿತು ಎನ್ನಬಹುದು. ಇವರು ಶ್ರೀಮಂತ ಪರಂಪರೆಯ ಕುಟುಂಬದವರಾದರೂ ಇವರು ಜನಿಸುವ ಸಂದರ್ಭದಲ್ಲಿ ಇವರ ಕುಟುಂಬ ಗೇಣಿದಾರರ ಕುಟುಂಬವಾಗಿ ಪರಿವರ್ತಿತಗೊಂಡ ಬಡ ಕುಟುಂಬವಾಗಿತ್ತು. ಅತ್ಯಂತ ಬಡತನ ಮತ್ತು ಜಮೀನ್ದಾರರ ಅಧೀನತೆಯಲ್ಲಿ ತಮ್ಮ ಬಾಲ್ಯವನ್ನು ಕಳೆದಿರುವ ಗೋಪಾಲಗೌಡರು ಸಹಜವಾಗಿ ಸಮಾಜವಾದಿ ತತ್ವದ ಕುರಿತು ಚಿಂತಿಸತೊಡಗಿರಬಹುದು. ಅಲ್ಲದೆ ತಮ್ಮ ಸುತ್ತಮುತ್ತ ಇದ್ದ ಜಮೀನ್ದಾರಿ ಪದ್ಧತಿಯ ಪರಿಸರವು ಇವರ ಮೇಲೆ ಬಹಳಷ್ಟು ಪ್ರಭಾವ ಬೀರಬಹುದು.

ಗೋಪಾಲಗೌಡರು ತಮ್ಮ ವಿದ್ಯಾಭ್ಯಾಸದ ಸಂದರ್ಭದಲ್ಲಿಯೂ ಸಮಾಜವಾದಿ ತತ್ವಗಳಿಂದ ಪ್ರಭಾವಿತರಾಗಿರುವುದು ಕಂಡು ಬರುತ್ತದೆ. ಇವರು ಸ್ವಾಭಾವಿಕವಾಗಿಯೇ ತೀಕ್ಷ್ಣಬುದ್ಧಿಯವರು. ಜಾಣ ವಿದ್ಯಾರ್ಥಿಯೂ ಆಗಿದ್ದರಿಂದ ತಾವು ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಯ ವಿದ್ಯಾರ್ಥಿಯಾಗಿರುವಾಗಲೇ ಸಮಾಜವಾದಿ ಚಿಂತಕರ, ಕ್ರಾಂತಿಕಾರಿ ಚಿಂತಕರ ಲೇಖನ, ಬರವಣಿಗೆಗಳನ್ನು ಓದಿ ಅವುಗಳಿಂದ ಪ್ರಭಾವಿತರಾಗಿದ್ದರು. ಫ್ರಾನ್ಸಿನ ಮಹಾಕ್ರಾಂತಿಗೆ ಪ್ರೇರಕವಾದ ಜಾನ್ ಲಾಕ್ ಮತ್ತು ಜೆ.ಜೆ. ರೂಸೋರವರ ಪ್ರಜಾಸತ್ತಾತ್ಮಕ ಕ್ರಾಂತಿಕಾರಿ ಲೇಖನಗಳನ್ನು, ಅವರ ಚಿಂತನೆಗಳನ್ನು ಕುರಿತು ಅಧ್ಯಯನ ಮಾಡಿದ್ದರು. ರಷ್ಯಾದ ಕ್ರಾಂತಿಗೆ ಪ್ರೇಕರವಾದ ಕಾರ್ಲ ಮಾರ್ಕ್ಸ್‌ವರ 'ದಾಸ್ ಕ್ಯಾಪಿಟಲ್ ' ಮತ್ತು ಕಮ್ಯುನಿಸ್ಟ್ ಮ್ಯಾನಿಫೆಸ್ಟೊ ಕೃತಿಗಳನ್ನು ಓದಿ ತಿಳಿದಿದ್ದರು. ಜೊತೆಗೆ ಮಾರ್ಕ್ಸ್‌ರವರು ಸಮಾಜದ ಬದಲಾವಣೆಯಲ್ಲಿ ತುಳಿತಕ್ಕೆ ಒಳಗಾದವರ ಹೋರಾಟದ ಸ್ವರೂಪ ಹೇಗಿರಬೇಕು. ಶೋಷಿತರನ್ನು ಎಚ್ಚರಗೊಳಿಸುವ ವಿಧಾನ ಹೇಗಿರಬೇಕು. ಆ ಮೂಲಕ ಸಮಾಜದ ಬದಲಾವಣೆಯಲ್ಲಿ ಅನ್ಯಾಯಕ್ಕೊಳಗಾದವರ ಪಾತ್ರವನ್ನು ಎಳೆ ಎಳೆಯಾಗಿ ಮಾರ್ಮಿಕವಾಗಿ ಏನು ವಿವರಿಸಿದ್ದರೋ ಆ ಅಂಶಗಳು ಗೋಪಾಲಗೌಡರನ್ನು ಹೋರಾಟಕ್ಕೆ ಅಣಿಗೊಳಿಸಲು ಪ್ರೇರಕವಾದವು. ಅಲ್ಲದೆ ಟಾಲ್‌ಸ್ಟಾಯ್‌ರ ಕೃತಿಗಳಿಂದಲೂ ಇವರು ಪ್ರಭಾವಿತರಾಗಿದ್ದರು.

ಅಂತೆಯೇ ಹಲವಾರು ಜನ ಭಾರತೀಯ ಚಿಂತಕರುಗಳು, ಹೋರಾಟಗಾರರು ತಮ್ಮ ಸ್ವಂತ ಅನುಭವದ ಮೂಲಕ ರಚಿಸಿದ ಗ್ರಂಥಗಳು ಪ್ರಕಟಿಸಿದ ಲೇಖನಗಳು ಗೌಡರ ಮೇಲೆ ಬಹಳಷ್ಟು ಪ್ರಭಾವ ಬೀರಿವೆ. ಗಾಂಧೀಜಿಯವರ ಅಧಿಕಾರ ಮತ್ತು ಸಂಪತ್ತಿನ ವಿಕೇಂದ್ರೀಕರಣ, ಸ್ವಯಂ ಪರಿಪೂರ್ಣ ಗ್ರಾಮಗಳ ಬಗೆಗಿನ ಚಿಂತನೆ, ಲೋಹಿಯಾರವರ ಸಮಾಜವಾದಿ ತತ್ವವನ್ನಾಧರಿಸಿದ ಚಿಂತನೆಗಳು, ಜಯಪ್ರಕಾಶ್ ನಾರಾಯಣರ ಸಾಂಸ್ಕೃತಿಕ ಬದಲಾವಣೆಯ ಕುರಿತ ಚಿಂತನೆಗಳು ಇಷ್ಟೇ ಅಲ್ಲದೆ ಆ ಸಂದರ್ಭದಲ್ಲಿ ಅನೇಕರು ಜಾತಿ ವ್ಯವಸ್ಥೆ , ಸಮಾಜದಲ್ಲಿದ್ದ ಅನೇಕ ಮೌಢ್ಯಾಚರಣೆಗಳ ವಿರುದ್ಧ ಏನು ಚಿಂತಿಸಿದ್ದರು, ಹೋರಾಡಿದ್ದರೋ ಆ ಎಲ್ಲಾ ವಿಚಾರಗಳಿಂದ ಪ್ರಭಾವಿತರಾದ ಗೋಪಾಲಗೌಡರು ಸಮಾಜವಾದಿ ತತ್ವಗಳ ಕಡೆಗೆ ಆಕರ್ಷಿತರಾದರು.

ಗೋಪಾಲಗೌಡರು ವಿದ್ಯಾರ್ಥಿಯಾಗಿರುವ ಸಂದರ್ಭದಲ್ಲಿ ಇವರ ಮೇಲೆ ಅಪಾರ ಪ್ರಭಾವ ಬೀರಿದವರೆಂದರೆ ಗುರುಗಳಾದ ಕಮಕೋಡು ನರಸಿಂಹ ಶಾಸ್ತ್ರಿಗಳು. ನಂತರದಲ್ಲಿ ಸ್ನೇಹಿತರಾದ ಟಿ.ವಿಶ್ವನಾಥರಾವ್. ಈ ಇಬ್ಬರು ಹಲವಷ್ಟು ವಿಷಯಗಳನ್ನು ಆಳವಾಗಿ ಅಧ್ಯಯನ ಮಾಡಿರುವ ಕ್ರಾಂತಿಕಾರಿ ಮನೋಭಾವವುಳ್ಳವರಾಗಿದ್ದರು. ಇವರ ನಡೆ, ನುಡಿ, ದೇಶಾಭಿಮಾನ ಅನ್ಯಾಯಕ್ಕೊಳಗಾದವರ ಬಗೆಗಿದ್ದ ಕರುಣೆ, ಸಹಾನುಭೂತಿ ಇವುಗಳು ಗೌಡರ ಮೇಲೆ ಬಹಳಷ್ಟು ಪ್ರಭಾವ ಬೀರಿದ್ದವು. ಇವರು ಸಮಾಜವಾದದ ಕುರಿತು ಯೋಚಿಸಲು ಪ್ರೇರಣೆಯಾದ ಇನ್ನೊಂದು ಅಂಶವೆಂದರೆ, ತಾವು ಹಳ್ಳಿಯಲ್ಲಿ ನಡೆಸಿದ ಚಟುವಟಿಕೆ. 1944-45 ರಲ್ಲಿ ಶಿವಮೊಗ್ಗದಲ್ಲಿ ಇಂಟರ್ ಮೀಡಿಯೆಟ್ ವಿದ್ಯಾಭ್ಯಾಸವನ್ನು ಅರ್ಧದಲ್ಲಿಯೇ ಮೊಟಕುಗೊಳಿಸಿ ಊರಿಗೆ ಬಂದಾಗ ''ವಯಸ್ಕರ ರಾತ್ರಿ ಶಾಲೆ ನಡೆಸುವುದು, ಖಾದಿ ನೂಲು ತೆಗೆಯುವುದು, ಸ್ವಾತಂತ್ರ್ಯದ ಹೋರಾಟದ ಕುರಿತು ಹಳ್ಳಿಗರೊಂದಿಗೆ ಚರ್ಚಿಸುವುದು, ಹಳ್ಳಿಗರ ಸಮಸ್ಯೆಗಳನ್ನು ಪರಿಶೀಲಿಸಿ ಬಗೆಹರಿಸುವುದು, ಮಹಾಭಾರತ ಮುಂತಾದ ಉದಾತ್ತ ಕೃತಿಗಳನ್ನು ಅಭ್ಯಾಸ ಮಾಡುವುದು, ಆಧುನಿಕ ಸಾಹಿತ್ಯ ಕೃತಿಗಳನ್ನು ಅವಲೋಕಿಸುವುದು ಅವುಗಳನ್ನು ಜನರ ಮುಂದೆ ಓದಿ ಹೇಳುವುದು''* ಇಂತಹ ವಿಭಿನ್ನ ಚಟುವಟಿಕೆಗಳಲ್ಲಿ ತೊಡಗಿಕೊಂಡು ಹಳ್ಳಿಗರೊಂದಿಗೆ ಬೆರೆತು ಅವರ ಕಷ್ಟ -ಸುಖಗಳಲ್ಲಿ ನೇರವಾಗಿ ಭಾಗವಹಿಸುತ್ತಿದ್ದರು. ಇಂತಹ ಅನುಭವಗಳು

---

*ಜೀವಂತ ಜ್ವಾಲೆ - ಕೋಣಂದೂರು ವೆಂಕಪ್ಪ , ಲೇಖನ -ಶಾಂತವೇರಿಯಿಂದ ಶಾಸನ ಸಭೆಗೆ.

ಇವರು ನಿರಂತರವಾಗಿ ದೀನ ದಲಿತರ, ಕಷ್ಟಕ್ಕೊಳಗಾದವರ ಪರ ಯೋಚಿಸಲು, ಚಿಂತಿಸಲು, ಹೋರಾಡಲು ಅನುವು ಮಾಡಿಕೊಟ್ಟತೆನ್ನಬಹುದು. ಕಾರಣ ಈ ಹಳ್ಳಿಗರ ಜೊತೆಗಿನ ಬದುಕೆಂದರೆ ಸಂಕಷ್ಟದಲ್ಲಿರುವವರ, ಅನ್ಯಾಯಕ್ಕೊಳಗಾದವರ, ಅಂಧಕಾರದಲ್ಲಿರುವವರ ನಡುವಿನ ಬದುಕೇ ಆಗಿತ್ತು. ಆದ್ದರಿಂದ ಇಂತಹ ಬದುಕಿನಿಂದ ಆಚೆ ಬರಲು ಪ್ರಯತ್ನಿಸತೊಡಗಿದರು.

ಗೋಪಾಲಗೌಡರು ಜನಿಸಿದ ಕಾಲ ಮತ್ತು ತಮ್ಮ ವಿದ್ಯಾಭ್ಯಾಸ ಜೀವನವನ್ನು ಕಳೆದಿರುವುದು ಭಾರತದ ಸ್ವಾತಂತ್ರ್ಯದ ಸಂಗ್ರಾಮದ ಕಾಲದಲ್ಲಿ, ಆಗ ಭಾರತದಾದ್ಯಂತ ದೇಶಾಭಿಮಾನ, ದೇಶಭಕ್ತಿ ಉಕ್ಕಿ ಬರುತ್ತಿದ್ದ ಕಾಲವದು. ದೇಶದ ಮೂಲೆ, ಮೂಲೆಯಲ್ಲಿ ಸ್ವಾತಂತ್ರ್ಯದ ಕಿಚ್ಚು ಹತ್ತಿ ಉರಿಯುತ್ತಿದ್ದ ಕಾಲ. ಇಡೀ ದೇಶವೇ ಸ್ವರಾಜ್ಯ ಪಡೆಯುವುದಕ್ಕಾಗಿ ಹೋರಾಡುತ್ತಿದ್ದ ಕಾಲ. ಈ ಹೋರಾಟದ ಜೊತೆಯಲ್ಲಿಯೇ ಭಾರತದ ಸಮಾಜದಲ್ಲಿ ಆಳವಾಗಿ ಬೇರೂರಿದ್ದ ಅಂಧಕಾರ, ಮೌಢ್ಯ, ಜಾತೀಯತೆ, ಶೋಷಣೆ ಮೊದಲಾದವುಗಳನ್ನು ತೊಡೆದು ಹಾಕುವ ಆ ಮೂಲಕ ಸಮಾಜದ ಬದಲಾವಣೆಯ ಪ್ರಯತ್ನದಲ್ಲಿ ಅನೇಕರು ತೊಡಗಿದ್ದರು. ಈ ಅಂಶಗಳು ಗೋಪಾಲಗೌಡರ ಮೇಲೆ ಗಾಢ ಪ್ರಭಾವ ಬೀರಿದ್ದವು. ಜೊತೆಗೆ ವಸಾಹತುಶಾಹಿತ್ವ, ಸಾಮ್ರಾಜ್ಯಶಾಹಿತ್ವ ದುಷ್ಪರಿಣಾಮಗಳನ್ನು ಅನುಭವಿಸುತ್ತಿದ್ದ ಭಾರತದ ಪರಿಸ್ಥಿತಿಯನ್ನು ಸ್ವತಃ ಕಣ್ಣಾರೆ ಕಂಡ ಗೋಪಾಲಗೌಡರು ಸಹಜವಾಗಿಯೇ ಸಾಮ್ರಾಜ್ಯಶಾಹಿತ್ವ, ವಸಾಹತುಶಾಹಿತ್ವ, ಬಂಡವಾಳಶಾಹಿತ್ವದ ವಿರುದ್ಧ ಸಿಡಿದೆದ್ದು ಸಮಾಜವಾದದ ಕಡೆಗೆ ಕರ್ಷಿತರಾದರು. ಈಗಾಗಲೇ ನಿರಂಕುಶಪ್ರಭುತ್ವದ ಅನ್ಯಾಯ, ಶೋಷಣೆ, ದಬ್ಬಾಳಿಕೆಯ ಆಡಳಿತದ ವಿರುದ್ಧ ಮತ್ತು ಸಮಾನತೆ, ಸ್ವಾತಂತ್ರ್ಯ, ಭ್ರಾತೃತ್ವ ಪರವಾದ 1789 ರ ಫ್ರಾನ್ಸಿನ ಪ್ರಜಾಸತ್ತಾತ್ಮಕ ಮಹಾಕ್ರಾಂತಿಯ ಕಾರಣ ಮತ್ತು ಪರಿಣಾಮಗಳನ್ನು ತಿಳಿದಿದ್ದರು. ಅಲ್ಲದೆ ರಷ್ಯಾದ 1917 ರ ಬೋಲ್ಸೆವಿಕ್ ಕ್ರಾಂತಿಯ ಉದ್ದೇಶ, ಕಾರಣ, ಪರಿಣಾಮಗಳ ಬಗ್ಗೆ ತಿಳಿದುಕೊಂಡು ಆ ರಾಷ್ಟ್ರಗಳಲ್ಲಿ ಅಸ್ತಿತ್ವಕ್ಕೆ ಬಂದ ಪ್ರಜಾಸತ್ತಾತ್ಮಕ ವ್ಯವಸ್ಥೆ ಮತ್ತು ಸಮತಾವಾದ ತತ್ವಗಳನ್ನು ಆಧಾರವಾಗಿಟ್ಟುಕೊಂಡು ಅಲ್ಲಿನ ಆಡಳಿತ ವ್ಯವಸ್ಥೆ, ಸಾಮಾಜಿಕ, ಆರ್ಥಿಕ ಪರಿಸ್ಥಿತಿಗಳನ್ನು ತಿಳಿದುಕೊಂಡ ಇವರು ಭಾರತದ ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿಗೆ ಸರಿಹೊಂದುವ ಪ್ರಜಾಸತ್ತಾತ್ಮಕ ಸಮಾಜವಾದದ ಕುರಿತು ಚಿಂತಿಸಲು ಆ ನಿಟ್ಟಿನಲ್ಲಿ ಹೋರಾಡಲು ಪ್ರೇರೇಪಿತರಾದರು.

ಗೋಪಾಲಗೌಡರು ಕಳೆದ ಬಾಲ್ಯ ಜೀವನದ ಪರಿಸರ ಮತ್ತು ಶಾಲಾ ದಿನಗಳಲ್ಲಿನ ಗುರುಗಳ ಪ್ರಭಾವ, ಇವರ ನಿರಂತರ ಅಧ್ಯಯನಗಳು ಆ ಮೂಲಕ ಪಡೆದುಕೊಂಡ ಅನುಭವಗಳು ಇವರನ್ನು ಒಬ್ಬ ಶ್ರೇಷ್ಠ ಸಮಾಜವಾದಿ ಚಿಂತಕನನ್ನಾಗಿ ರೂಪಿಸಲು ನಾಂದಿಯಾದವು. ಇವರ ಸಮಾಜವಾದಿ ಹೋರಾಟಕ್ಕೆ ಸೂಕ್ತ ವೇದಿಕೆಯನ್ನು ಒದಗಿಸಿಕೊಟ್ಟಿದ್ದು 1948 ಆಗಸ್ಟ್ 15 ರಂದು ರಚನೆಯಾದ ಸಮಾಜವಾದಿ ಪಕ್ಷ. 1948 ಮಾರ್ಚ್‌ನಲ್ಲಿ ಕಾಂಗ್ರೆಸ್ ಪಕ್ಷದಲ್ಲಿದ್ದ ಸಮಾಜವಾದಿ ನೇತಾರರು ಕಾಂಗ್ರೆಸ್ ಪಕ್ಷಕ್ಕೆ ರಾಜೀನಾಮೆ ನೀಡಿ ಹೊರಬಂದರು. ಅವರಲ್ಲಿ ಗೋಪಾಲಗೌಡರೂ ಒಬ್ಬರು. ಇವರು ಕಾಂಗ್ರೆಸ್ ಪಕ್ಷಕ್ಕೆ ರಾಜೀನಾಮೆ ನೀಡಿರುವುದನ್ನು ಸಮರ್ಥಿಸುತ್ತಾ "ಕಾಂಗ್ರೆಸ್ ಪಕ್ಷ ಸ್ವರಾಜ್ಯ ತರುವುದಕ್ಕೆ ಮಾತ್ರ ಸೀಮಿತ. ಇನ್ನು ಮುಂದೆ ನಾವು ಸ್ವತಂತ್ರ ಭಾರತ ಕಟ್ಟಬೇಕು. ಅದಕ್ಕೆ ಸಮಾಜವಾದವೇ ತಾರಕ ಮಂತ್ರ "* ಎಂದು ಘೋಷಿಸಿದರು. ಇದೇ ಮಾತುಗಳನ್ನು ಗಾಂಧೀಜಿಯವರು ಆಗಾಗ ಹೇಳುತ್ತಿದ್ದುದನ್ನು ನೆನಪಿಸಿಕೊಳ್ಳಬಹುದಾಗಿದೆ. ಇದನ್ನು ಗಮನಿಸಿದಾಗ ಗೌಡರಿಗೆ ಸಮಾಜವಾದದ ಬಗೆಗಿದ್ದ ದೂರದೃಷ್ಟಿ ಮತ್ತು ನಿಸ್ವಾರ್ಥ ಮನೋಭಾವ ವ್ಯಕ್ತವಾಗುತ್ತದೆ. ಸಮಾಜವಾದಿ ಪಕ್ಷ ರಚನೆಯಾದ ಮೇಲೆ ಈಗಾಗಲೇ ಜಯಪ್ರಕಾಶ ನಾರಾಯಣ್ ಮತ್ತು ಕಮಲಾದೇವಿ ಚಟ್ಟೋಪಾಧ್ಯಾಯರು ಕರ್ನಾಟಕ ಸಂಚಾರ ಮತ್ತು ಸಮಾಜವಾದಿ ತತ್ವ ಪ್ರಚಾರ ಕೈಗೊಂಡಿದ್ದರು. ಇಂತಹ ಪ್ರಚಾರದಿಂದ ಆಕರ್ಷಿತರಾದ ಇವರು ಸಮಾಜವಾದದ ಬೀಜವನ್ನು ಕರ್ನಾಟಕದಾದ್ಯಂತ ಬಿತ್ತುವ ಕಾರ್ಯದಲ್ಲಿ ನಿರತರಾಗುವುದರ ಮೂಲಕ ಕರ್ನಾಟಕ ರಾಜ್ಯದ ಸಮಾಜವಾದಿ ಪಕ್ಷದ ಅಗ್ರಮಾನ್ಯ ನಾಯಕರಾಗಿ ಹೊರಹೊಮ್ಮಿದರು.

ಗೋಪಾಲಗೌಡರು ಸಮಾಜವಾದಿ ಚಿಂತನೆ ಮತ್ತು ಹೋರಾಟಕ್ಕೆ ಪ್ರೇರಕವಾದ ಅತಿ ಮುಖ್ಯ ಅಂಶವೆಂದರೆ, ಮಲೆನಾಡಿನ ಭಾಗದಲ್ಲಿ ಆಳವಾಗಿ ಬೇರೂರಿದ್ದ ಜಮೀನ್ದಾರಿ ಪದ್ಧತಿ. ಸ್ವತಃ ಗೋಪಾಲಗೌಡರೇ ಗೇಣಿದಾರರಾಗಿದ್ದು ಜಮೀನ್ದಾರರಿಂದಾಗುವ ಕಿರುಕುಳ ಮತ್ತು ಅನ್ಯಾಯಗಳೇನು ಎಂಬುದನ್ನು ಅರಿತಿದ್ದರು. ಮಲೆನಾಡಿನ ಭಾಗದಲ್ಲಿ ಜಮೀನ್ದಾರರು ಗೇಣಿದಾರರನ್ನು ಮತ್ತು ಭೂರಹಿತ ಕೂಲಿಯಾಳುಗಳನ್ನು ಬೇರೆ ಬೇರೆ ಹಂತಗಳಲ್ಲಿ ವಿಭಿನ್ನ

*ಜೀವಂತ ಜ್ವಾಲೆ - ಕೋಣಂದೂರು ವೆಂಕಪ್ಪ, ಲೇಖನ -ಶಾಂತವೇರಿಯಿಂದ ಶಾಸನ ಸಭೆಗೆ.

ವಿಧಗಳಲ್ಲಿ ಶೋಷಿಸುತ್ತಿದ್ದುದು ಮತ್ತು ಕಿರುಕುಳ ಕೊಡುತ್ತಿದ್ದುದು ಅವರ ಅನುಭವಕ್ಕೆ ಬಂದ ವಿಷಯವಾಗಿತ್ತು. ಜಮೀನ್ದಾರಿ ಪದ್ಧತಿಯ ಪ್ರಕಾರ ಸಾಗುವಳಿಗೆ ಯೋಗ್ಯವಾಗಿರುವ ಸಾವಿರಾರು ಎಕರೆ ಭೂಮಿಯ ಒಡೆತನವನ್ನು ಒಬ್ಬ ಭೂಮಾಲೀಕ ಹೊಂದಿದ್ದು, ಆತನ ಜಮೀನಿನಲ್ಲಿ ದುಡಿಯುವವರು ಆತನ ಒಕ್ಕಲುಗಳಾಗಿರುತ್ತಿದ್ದರು. ಭೂಮಾಲೀಕ, ಒಕ್ಕಲುಗಳನ್ನು ಗುಲಾಮರಂತೆ ನಡೆಸಿಕೊಳ್ಳುತ್ತಿದ್ದ. ಒಡೆಯ ಹೇಳಿದಷ್ಟು ಗೇಣಿಯನ್ನು ತಕರಾರಿಲ್ಲದೆ ನೀಡಬೇಕಿತ್ತು. ಭೂಮಿ ಗೇಣಿದಾರನ ಅಧೀನದಲ್ಲಿರುತ್ತಿಲ್ಲವಾದ್ದರಿಂದ ಒಡೆಯನ ಅನುಮತಿ ಇಲ್ಲದೆ ಭೂಮಿಯನ್ನು ಸಾಗುವಳಿ ಮಾಡುವಂತಿರಲಿಲ್ಲ. ಪ್ರತಿ ವರ್ಷವೂ ಗೇಣಿಯನ್ನು ಹೆಚ್ಚು ಮಾಡುವ ಅಧಿಕಾರ ಒಡೆಯನಿಗಿತ್ತು. ಒಡೆಯ ಮತ್ತು ಗೇಣಿದಾರನ ನಡುವೆ ಭಿನ್ನಾಭಿಪ್ರಾಯ ಉಂಟಾದರೆ, ಗೇಣಿದಾರ ಫಸಲು ಸಹಿತ ಭೂಮಿಯನ್ನು ಬಿಟ್ಟುಕೊಡಬೇಕಿತ್ತು. ಇಲ್ಲಿ ಗೇಣಿದಾರರನ್ನು ರಕ್ಷಿಸುವ ಯಾವ ನಿಯಮ, ಕಾನೂನುಗಳೂ ಇರಲಿಲ್ಲ.

ಒಡೆಯರು ಗೇಣಿ ಪಡೆಯುವಾಗ ಅಳತೆಯಲ್ಲಿ ಮೋಸ ಮಾಡುತ್ತಿದ್ದರು. ಗೇಣಿ ಭತ್ತದ ಜೊತೆಗೆ ಹುಲ್ಲನ್ನು ಪುಕ್ಕಟೆಯಾಗಿ ನೀಡಬೇಕಿತ್ತು. ಯಾವುದೇ ಸಂದರ್ಭದಲ್ಲಿ ಪ್ರಕೃತಿ ವಿಕೋಪಗಳಿಂದ ಬೆಳೆಹಾನಿಯಾಗಿದ್ದರೂ ಗೇಣಿ ನೀಡುವುದನ್ನು ನಿಲ್ಲಿಸುವಂತಿರಲಿಲ್ಲ. ಒಂದು ವೇಳೆ ಗೇಣಿ ನೀಡಿಲ್ಲ ಎಂದರೆ ಮುಂದಿನ ಬೆಳೆಯಲ್ಲಿ ಅದಕ್ಕೆ ಬಡ್ಡಿ ಸೇರಿಸಿ ಒಂದಕ್ಕೆರಡರಷ್ಟು ವಸೂಲಿ ಮಾಡುತ್ತಿದ್ದರು. ಇಷ್ಟೇ ಅಲ್ಲದೆ ಒಡೆಯರ ಮನೆಯಲ್ಲಿ ಗೇಣಿ ರೈತ ವರ್ಷದಲ್ಲಿ 20 ರಿಂದ 25 ದಿನಗಳ ಕಾಲ ಬಿಟ್ಟಿ ದುಡಿಯಬೇಕಿತ್ತು. ಒಡೆಯರನ್ನು ಮತ್ತು ಅವರ ಕುಟುಂಬ ದವರನ್ನು ಅತ್ಯಂತ ಗೌರವದಿಂದ ಕಾಣಬೇಕಿತ್ತು. ಆದರೆ ಒಡೆಯರು ಮಾತ್ರ ಗೇಣಿದಾರರನ್ನು ಅಸ್ಪೃಶ್ಯರಂತೆ ಕಾಣುತ್ತಿದ್ದರು. ಇವರಿಗೆ ಯಾವ ಗೌರವವೂ ಇರಲಿಲ್ಲ. ಒಡೆಯರ ಎದುರಿನಲ್ಲಿ ಒಳ್ಳೆಯ ಬಟ್ಟೆ ಧರಿಸುವಂತಿರಲಿಲ್ಲ. ಕಾಲಿಗೆ ಚಪ್ಪಲಿ ಹಾಕುವಂತಿರಲಿಲ್ಲ. ಹಾಕಿದ್ದರೂ ಅವರ ಮನೆಯ ಎದುರಿನ ರಸ್ತೆಯಲ್ಲಿ ಓಡಾಡುವಾಗ ಅವುಗಳನ್ನು ಕಾಲಿನಿಂದ ತೆಗೆದು ಕೈನಲ್ಲಿ ಹಿಡಿದುಕೊಂಡು ಮನೆ ಮರೆಯಾದ ಮೇಲೆ ಮತ್ತೆ ಹಾಕಿಕೊಳ್ಳಬೇಕಿತ್ತು. ಒಟ್ಟಿನಲ್ಲಿ ಒಡೆಯನಿಗೆ ಕೀಳೆನಿಸಿದ, ಅಸಹ್ಯವಾದ ಮತ್ತು ಅವಮಾನವೆಂದು ತಿಳಿದಿರುವ ಎಲ್ಲಾ ಕೆಲಸಗಳನ್ನು ಗೇಣಿರೈತನೇ ಮಾಡಬೇಕಿತ್ತು. ಗೇಣಿ ರೈತರ ಮಕ್ಕಳು ವಿದ್ಯಾಭ್ಯಾಸ ಮಾಡುವುದಕ್ಕೂ

ಅವಕಾಶವಿರಲಿಲ್ಲ, ಗೇಣಿದಾರ ಅಥವಾ ಕಾರ್ಮಿಕ ಒಡೆಯರ ಆಜ್ಞೆಯನ್ನು ಮೀರಿ ವರ್ತಿಸಿದರೆ ಆತನನ್ನು ಕಂಬಕ್ಕೆ ಕಟ್ಟಿಹಾಕಿ ಚಡಿಯೇಟು ನೀಡಿ ಶಿಕ್ಷಿಸುತ್ತಿದ್ದ ಉದಾಹರಣೆಗಳಿವೆ. ಆಳುಗಳಿಗೆ ಒಡೆಯರೇ ಸರ್ಕಾರ ಎಂಬ ಪರಿಸ್ಥಿತಿ ನಿರ್ಮಾಣವಾಗಿತ್ತು. ಒಡೆಯರು ಮಾಡಿದ ನಿಯಮಗಳೇ ಕಾನೂನುಗಳಾಗಿದ್ದವು. ಇದೇ ಸ್ವಾಭಾವಿಕವಾದ ಬದುಕು, ತಾವಿರುವ ಸ್ಥಿತಿ ಬದಲಾಗಲು ಸಾಧ್ಯವೇ ಇಲ್ಲ ಎಂಬ ಭಾವನೆಯನ್ನು ಹೊಂದಿದ್ದರು. ರೈತರ ಸ್ವಾಭಿಮಾನಕ್ಕಾಗಲಿ, ಸ್ವಾತಂತ್ರ್ಯಕ್ಕಾಗಲಿ ಅವಕಾಶವೇ ಇರಲಿಲ್ಲ.

ರೈತರ ಮತ್ತು ಕೂಲಿಯಾಳುಗಳ ಶೋಚನೀಯ ಕಷ್ಟ -ಕಾರ್ಪಣ್ಯದ ಬದುಕಿನ ಸ್ಥಿತಿಗತಿಗಳು ಗೋಪಾಲಗೌಡರ ಮನಸ್ಸಿನ ಮೇಲೆ ತೀವ್ರ ಪ್ರಭಾವ ಬೀರಿದ್ದವು. ಅಲ್ಲದೆ ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿದ್ದ ಅನೇಕ ವಿಧವಾದ ಕಂದಕಗಳು, ಧಾರ್ಮಿಕ ಮೌಢ್ಯಗಳು, ಶಿಕ್ಷಣದ ಕೊರತೆ, ಜಾತಿ ಪದ್ಧತಿಯ ದೋಷಗಳು ಮೊದಲಾದವುಗಳು ಇವರನ್ನು ಕಾಡುತ್ತಿದ್ದ ದಿನನಿತ್ಯದ ಸಮಸ್ಯೆಗಳಾಗಿದ್ದವು. ಆದ್ದರಿಂದ ಗೋಪಾಲಗೌಡರು ಭಾರತೀಯ ಸಮಾಜದಲ್ಲಿ ಆಳವಾಗಿ ಬೇರೂರಿದ್ದ ಜಾತಿ ಪದ್ಧತಿ, ಧಾರ್ಮಿಕ ಅಂಧಾಚರಣೆಗಳು, ಶಿಕ್ಷಣದ ಕೊರತೆ, ಗೇಣಿದಾರರ ಸಮಸ್ಯೆ, ಅಸಮಾನತೆಯಂತಹ ಹಲವಾರು ಸಮಸ್ಯೆಗಳನ್ನು ತೊಡೆದು ಹಾಕಿ ಆ ಮೂಲಕ ಸಮಾಜದ ಬದಲಾವಣೆಗೆ ಸರಿ ಹೊಂದುವ ಸಮಾಜವಾದಿ ತತ್ವಗಳನ್ನು ರೂಪಿಸಿಕೊಂಡಿದ್ದರು. ಮತ್ತು ಅವುಗಳ ಅನುಷ್ಠಾನಕ್ಕಾಗಿ ಹೋರಾಡಿದರು. ಇವರು ಪ್ರಪಂಚದ ಬೇರೆ ಬೇರೆ ದೇಶದಲ್ಲಿರುವ ಸಮಾಜವಾದವನ್ನು ತಿಳಿದುಕೊಂಡಿದ್ದರು. ಆದರೆ ಭಾರತದಲ್ಲಿ ಅದನ್ನೇ ಯಥಾವತ್ತಾಗಿ ಅನುಷ್ಠಾನಗೊಳಿಸಲು ಪ್ರಯತ್ನಿಸದೆ ಇಲ್ಲಿನ ಆರ್ಥಿಕ, ಸಾಮಾಜಿಕ, ರಾಜಕೀಯ ಸ್ಥಿತಿಗತಿಗಳಿಗೆ ಸರಿಹೊಂದುವ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ಆ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಪ್ರಯತ್ನ ಮಾಡಿದ್ದಾರೆ. ಇವರ ಇಂತಹ ಪ್ರಯತ್ನಗಳಲ್ಲಿ ಸಮಾಜವಾದಿ ತತ್ವಾಧಾರಿತ ಮೊದಲ ಹೋರಾಟ ಎಂದರೆ ಕಾಗೋಡು ಸತ್ಯಾಗ್ರಹ.

ಭಾರತವು ಕೃಷಿಯನ್ನಾಧರಿಸಿದ ದೇಶ. ಆದ್ದರಿಂದ ಭಾರತದಲ್ಲಿ ಸಮಾಜವಾದದ ಅನುಷ್ಠಾನ ಎಂದರೆ ಜಮೀನ್ದಾರಿ ಪದ್ಧತಿಯ ನಿರ್ಮೂಲನೆ ಮತ್ತು ಭೂಸುಧಾರಣೆ ಎಂದು

ಮನಗಂಡಿದ್ದ ಗೋಪಾಲಗೌಡರು ಜಮೀನ್ದಾರಿ ಪದ್ಧತಿಯ ನಿರ್ಮೂಲನದ ಹೋರಾಟದಲ್ಲಿ ಪಾಲ್ಗೊಂಡರು. ಇದು 1951 ರಲ್ಲಿ ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕು, ಕಾಗೋಡು ಎಂಬ ಗ್ರಾಮದಲ್ಲಿ ಭೂಮಾಲೀಕರಾಗಿದ್ದ ಕೆ.ಜಿ. ಒಡೆಯರ್ ವಿರುದ್ಧ ನಡೆದ ಹೋರಾಟವೇ ಈ 'ಕಾಗೋಡು ರೈತ ಸತ್ಯಾಗ್ರಹ '. ಕೆ.ಜಿ. ಒಡೆಯರ್ ಸಾವಿರಾರು ಎಕರೆ ಭೂಮಿಯನ್ನು ಹೊಂದಿದ್ದ ಭೂಮಾಲೀಕರಾಗಿದ್ದು, ನೂರಾರು ಒಕ್ಕಲುಗಳನ್ನು, ಕೂಲಿಯಾಳುಗಳನ್ನು ಇಟ್ಟುಕೊಂಡಿದ್ದರು. ಈ ಭೂ ಒಡೆಯರು ಒಕ್ಕಲುಗಳನ್ನು ಮತ್ತು ಕೂಲಿಯಾಳುಗಳನ್ನು ಅತ್ಯಂತ ಅಮಾನವೀಯವಾಗಿ ನೋಡಿಕೊಳ್ಳುತ್ತಿದ್ದರು. ಇಂತಹ ಕ್ರೂರ ವ್ಯಕ್ತಿತ್ವದ ಒಡೆಯರ ವಿರುದ್ಧ ನಡೆದ ಹೋರಾಟವೆ ಕಾಗೋಡು ರೈತ ಹೋರಾಟ.

ಕಾಗೋಡು ರೈತ ಹೋರಾಟ ಸಾಗರ ತಾಲ್ಲೂಕಿನ ರೈತ ಸಂಘದ ನೇತೃತ್ವದಲ್ಲಿ ಪ್ರಾರಂಭವಾಯಿತು. ಕಾಗೋಡು ಗ್ರಾಮದ ರೈತರೆಲ್ಲ ಸಂಘಟಿತರಾಗಿ ಒಡೆಯರ ದಬ್ಬಾಳಿಕೆ, ದೌರ್ಜನ್ಯದ ವಿರುದ್ಧ ಅವರ ಅನುಮತಿ ಇಲ್ಲದೆಯೇ ಜಮೀನಿಗಿಳಿದು ಉಳುಮೆ ಮಾಡಲು ಪ್ರಾರಂಭಿಸಿದರು. ಈ ಕಾರ್ಯಾಚರಣೆ ಒಡೆಯರನ್ನು ಕೆರಳಿಸಿತಲ್ಲದೆ, ಉಗ್ರ ಹೋರಾಟಕ್ಕೆ ನಾಂದಿಯಾಯಿತು. ಕಾಂಗ್ರೆಸ್ ಪಕ್ಷದ ಸಂಪೂರ್ಣ ಬೆಂಬಲ ಹೊಂದಿದ್ದ ಒಡೆಯಾರ್ ರೈತರ ಮೇಲೆ ದೌರ್ಜನ್ಯ ಮಾಡಿಸಿದರಲ್ಲದೆ ಪೊಲೀಸ್ ಇಲಾಖೆಯ ನೆರವಿನಿಂದ ರೈತರ ಮೇಲೆ ಲಾಠಿ ಚಾರ್ಜ್ ಮಾಡಿಸಿ ಅನೇಕ ರೈತರನ್ನು ಬಂಧಿಸಿದರು.  ಆದರೆ ಹೋರಾಟ ನಿಲ್ಲಲಿಲ್ಲ. ರೈತರು ಸ್ವಯಂ ಪ್ರೇರಿತರಾಗಿ ಉತ್ಸಾಹದಿಂದ  ಹೋರಾಟಕ್ಕಿಳಿದರು. ದಿನಾಲೂ ಅನೇಕ ರೈತರನ್ನು ಬಂಧಿಸಲಾಯಿತು. ಹೋರಾಟ ದಿನೇ ದಿನೇ ತೀವ್ರ ಸ್ವರೂಪ ಪಡೆದರೂ ಕೊನೆ ಕೊನೆಗೆ ಹೆಚ್ಚು ಹೆಚ್ಚು ರೈತರು ಬಂದನಕ್ಕೊಳಗಾದ ಪರಿಣಾಮ ಹೋರಾಟ ಕ್ಷೀಣಿಸಲಾರಂಭಿಸಿತು. ಆದರೆ ಈ ವಿಷಯ ತಿಳಿದ ಗೋಪಾಲಗೌಡರು ಸಮಾಜವಾದಿ ಪಕ್ಷದ ಬೆಂಬಲದೊಂದಿಗೆ ಹೋರಾಟಕ್ಕಿಳಿದು ಪ್ರವಾಹದ ಹಾಗೆ ಅಬ್ಬರಿಸಿ ಆ ಹೋರಾಟಕ್ಕೆ ಹೊಸ ಚೈತನ್ಯ, ಹೊಸ ಆಯಾಮವನ್ನು ನೀಡಿದರು. ಮತ್ತು ಆ ಹೋರಾಟವನ್ನು ಒಂದು ಯಶಸ್ವಿ ಐತಿಹಾಸಿಕ ಹೋರಾಟವನ್ನಾಗಿ ನಿರೂಪಿಸಿದರು.

ಗೋಪಾಲಗೌಡರು ಹೋರಾಟದಲ್ಲಿ ಭಾಗವಹಿಸಿ ಅದರ ನೇತೃತ್ವ ವಹಿಸಿ ರೈತರನ್ನು ಪ್ರೋತ್ಸಾಹಿಸುವ ಅವರಲ್ಲಿ ಆತ್ಮಸ್ಥೈರ್ಯವನ್ನು ತುಂಬುವ ಕಾರ್ಯವನ್ನು ಮಾಡಿ ವಿವಿಧ ಭಾಗದ

ಹಳ್ಳಿ ಹಳ್ಳಿಯ ಜನರನ್ನು ಸಂಘಟಿಸಿದರಲ್ಲದೆ ದೂರದ ಊರುಗಳಿಂದಲೂ ರೈತರನ್ನು ಸತ್ಯಾಗ್ರಹದಲ್ಲಿ ಪಾಲ್ಗೊಳ್ಳುವಂತೆ ಅವರಲ್ಲಿ ಉತ್ತೇಜನ ನೀಡಿದರು. ಊಟ ನಿದ್ರೆಗಳ ಪರಿವೆಯೇ ಇಲ್ಲದೆ ಜನರನ್ನು ಸಂಘಟಿಸುವ, ಉತ್ತೇಜಿಸುವ ಕಾರ್ಯದಲ್ಲಿ ತೊಡಗಿದ್ದರು. ಈ ಕಾರ್ಯದ ಜೊತೆಗೆ ರಾಷ್ಟ್ರೀಯ ನಾಯಕರಾದ ಜಯಪ್ರಕಾಶ್ ನಾರಾಯಣ, ಡಾ॥ಲೋಹಿಯಾರವರನ್ನು ಕರೆ ತಂದರು. ಆ ಮೂಲಕ ರೈತ ಹೋರಾಟ ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ಪ್ರಚಾರವಾಗಲು ಕಾರಣಕರ್ತರಾದರು. ಜೊತೆಗೆ ಬಿಹಾರದ ಪ್ರಸಿದ್ಧ ಕಿಸಾನ್ ನಾಯಕ ರಾಮಾನಂದನ ಮಿಶ್ರ, ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿದ್ದ ಕೆಂಗಲ್ ಹನುಮಂತಯ್ಯ, ಕಾಂಗ್ರೆಸ್ ನಾಯಕರಾಗಿದ್ದ ಕಡಿದಾಳ್ ಮಂಜಪ್ಪ ಮುಂತಾದ ನಾಯಕರುಗಳು ಹೋರಾಟದ ಸಂದರ್ಭದಲ್ಲಿ ಆಗಮಿಸಿ ರೈತರ ಸಮಸ್ಯೆಗೆ ಸೂಕ್ತ ರೀತಿಯಲ್ಲಿ ಸ್ಪಂದಿಸುವಂತೆ ಅವರನ್ನು ಪ್ರೇರೇಪಿಸಿದ ವ್ಯಕ್ತಿ ಗೋಪಾಲಗೌಡರಾಗಿದ್ದರು. ಒಟ್ಟಿನಲ್ಲಿ ಹೋರಾಟದ ನೇತೃತ್ವ ವಹಿಸಿ ಹೋರಾಟದಿಂದ ರೈತರು ಹಿಮ್ಮೆಟ್ಟದಂತೆ ಅವರಲ್ಲಿ ಉತ್ಸಾಹ, ಚೈತನ್ಯ ತುಂಬಿ ಅವರನ್ನು ಹೋರಾಟಕ್ಕೆ ಅಣಿಗೊಳಿಸಿ ರೈತರನ್ನು ಒಡೆಯರ ದಬ್ಬಾಳಿಕೆಯಿಂದ ಮುಕ್ತಿಗೊಳಿಸಲು ದಿಟ್ಟ ಹೋರಾಟವನ್ನು ಮಾಡಿದರು. ಆ ಮೂಲಕ ರೈತರ, ಕಡುಬಡವರ, ಕೂಲಿಕಾರ್ಮಿಕರ, ದೀನದಲಿತರ ಪ್ರಶ್ನಾತೀತ ನಾಯಕರಾಗಿ ಹೊರಹೊಮ್ಮಿದರು.

ಕಾಗೋಡು ರೈತ ಹೋರಾಟವೇ ಭೂಸುಧಾರಣಾ ಕಾಯಿದೆ ರಚನೆಯಾಗಲು ಬುನಾದಿಯಾಯಿತು. ಭಾರತ ಸರ್ಕಾರ ಮತ್ತು ಬಹುತೇಕ ರಾಜ್ಯ ಸರ್ಕಾರಗಳು ಗೇಣಿ ರೈತರ ಕುರಿತು ಚಿಂತಿಸಲು ಮತ್ತು ಆ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳಲು ಈ ಹೋರಾಟವೇ ನಾಂದಿಯಾಯಿತೆನ್ನಬಹುದು. ಕರ್ನಾಟಕ ರಾಜ್ಯದಲ್ಲಿ ಭೂಸುಧಾರಣ ಕಾಯ್ದೆ ಜಾರಿಗೆ ತರುವಲ್ಲಿ ಗೋಪಾಲಗೌಡರು ವಿಶೇಷ ಆಸಕ್ತಿ ವಹಿಸಿದ್ದಾರೆ. ಈ ಕಾಯ್ದೆಯನ್ನು ವ್ಯಾಪಕವಾಗಿ ಅನುಷ್ಠಾನ ಗೊಳಿಸುವಲ್ಲಿ ಇವರು ನಿರಂತರ ಪ್ರಯತ್ನ ಮಾಡಿದ್ದಾರೆ. ಕೃಷಿ ಭೂಮಿಯ ಸಮರ್ಪಕ ಹಂಚಿಕೆ ಯಾದಾಗ ಸಮಾಜದಲ್ಲಿನ ಆರ್ಥಿಕ ವರ್ಗಗಳ ನಡುವಿನ ಅಂತರವನ್ನು ಕಡಿಮೆ ಮಾಡಿ ಸಮಾನತೆ ಸಾಧಿಸಬಹುದೆಂಬುದು ಇವರ ನಂಬಿಕೆಯಾಗಿತ್ತು. ಆದ್ದರಿಂದಲೇ ಭಾರತದಲ್ಲಿ ಸಮಾಜವಾದದ ಅನುಷ್ಠಾನ ಎಂದರೆ ಕೃಷಿ ಭೂಮಿಯ ಸುಧಾರಣೆ ಮತ್ತು ರೈತಾಪಿ

ವರ್ಗದವರ, ಕೂಲಿಯಾಳುಗಳ ಪ್ರಗತಿ ಎಂದು ನಂಬಿದ್ದರು.

ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಸಮಾಜವಾದ ನೆಲೆಗೊಳ್ಳಬೇಕೆಂದರೆ ಇಲ್ಲಿನ ಜಾತಿ ಪದ್ಧತಿ ನಿರ್ಮೂಲನ ಆಗಬೇಕು ಎಂಬುದನ್ನು ಅರಿತ ಗೋಪಾಲಗೌಡರು ಸರ್ಕಾರ ಈ ಕುರಿತು ಕ್ರಮ ತೆಗೆದುಕೊಳ್ಳುವಂತೆ ಒತ್ತಾಯಿಸಿದರಲ್ಲದೆ, ಈ ನಿಟ್ಟಿನಲ್ಲಿ ಜನಜಾಗೃತಿ ಮಾಡುವ ಕಾರ್ಯ ಮಾಡಿದರು. ಇವರು ನಿರಂತರವಾಗಿ ಅಂತರಜಾತಿ ವಿವಾಹವನ್ನು ಪ್ರೋತ್ಸಾಹಿಸಿದರು. ತಾವು ಸ್ವತಃ ಅಂತರ ಜಾತಿ ವಿವಾಹವಾದರು. ಇಷ್ಟೇ ಅಲ್ಲದೆ ಸಹಭೋಜನಾ ಕೂಟಗಳನ್ನು ಏರ್ಪಡಿಸುವುದರ ಮೂಲಕ ಬೇರೆ ಬೇರೆ ಜಾತಿಯವರನ್ನು ಒಗ್ಗೂಡಿಸುವ ಮತ್ತು ಪರಸ್ಪರರು ಒಟ್ಟಾಗಿ ಬಾಳುವಂತೆ ಪ್ರೇರೇಪಿಸಿ ಜಾತಿಗಳ ನಡುವಿನ ಅಂತರವನ್ನು ಕಡಿಮೆ ಮಾಡಲು ಪ್ರಯತ್ನಿಸಿದರು. ಗೋಪಾಲಗೌಡರು ಆ ಜಾತಿ, ಈ ಜಾತಿ ಎಂಬ ತಾರತಮ್ಯ ಮಾಡದೇ ಯಾವುದೇ ಜಾತಿಯವರ ಮನೆಯಲ್ಲಿ ಉಳಿದುಕೊಳ್ಳುತ್ತಿದ್ದರು ಮತ್ತು ಊಟೋಪಚಾರ ಮಾಡುತ್ತಿದ್ದರು. ಜಾತಿ ನಡುವಿನ ಅಂತರವನ್ನು ಕಡಿಮೆ ಮಾಡಬೇಕೆಂದರೆ ಒಂದು ಊರು – ಕೇರಿಯನ್ನು ನಿರ್ಮಾಣ ಮಾಡುವಾಗ ಎಲ್ಲಾ ಜಾತಿಯರು ಒಟ್ಟಾಗಿ ಬಾಳುವಂತೆ ಮನೆಗಳನ್ನು ಒಟ್ಟೊಟ್ಟಿಗೆ ನಿರ್ಮಾಣ ಮಾಡಬೇಕೆನ್ನುತ್ತಿದ್ದರು. ಈ ಉದ್ದೇಶದಿಂದಲೇ ಇವರು ಶಾಸಕರಾಗಿದ್ದಾಗ ಸರ್ಕಾರಿ ಮನೆಗಳನ್ನು ನೀಡುವಾಗ, ನಿವೇಶನಗಳನ್ನು ಹಂಚುವಾಗ ಯಾವುದೇ ಊರು ಅಥವಾ ಕೇರಿ ಜಾತಿ ಕೇರಿಗಳಾಗದಂತೆ ನೋಡಿಕೊಳ್ಳಬೇಕೆಂದು ಅಧಿಕಾರಿಗಳಿಗೆ ಸೂಚನೆ ನೀಡುತ್ತಿದ್ದರು. ಇಷ್ಟೇ ಅಲ್ಲದೆ ಜಾತಿ ಪದ್ಧತಿಯ ನಿರ್ಮೂಲನೆಯಾಗಬೇಕೆಂದರೆ ಸಾರ್ವಜನಿಕ ಸ್ಥಳಗಳಲ್ಲಿ ಮತ್ತು ಧಾರ್ಮಿಕ ಮಂದಿರಗಳಲ್ಲಿ ಪ್ರವೇಶಕ್ಕೆ ಸಮಾನ ಅವಕಾಶ ನೀಡಬೇಕೆಂದು ಒತ್ತಾಯಿಸುತ್ತಿದ್ದರು. ಹೀಗೆ ಜಾತಿ ನಿರ್ಮೂಲನೆಗಾಗಿ ವಿಭಿನ್ನ ರೀತಿಯ ಚಿಂತನೆಗಳನ್ನು ಮಾಡುತ್ತಿದ್ದರಲ್ಲದೆ, ವಿಶಿಷ್ಟ ಕಾರ್ಯಕ್ರಮಗಳನ್ನು ರೂಪಿಸಿದ್ದರು.

ನಿಜವಾದ ಸಮಾಜವಾದದ ಅನುಷ್ಠಾನ ಶಿಕ್ಷಣದ ಪ್ರಗತಿಯನ್ನಾಧರಿಸಿದೆ ಎಂಬುದನ್ನು ನಂಬಿದ ಇವರು ಶಿಕ್ಷಣ ಅಭಿವೃದ್ಧಿಯಾದಾಗ ಮಾತ್ರ ಸಮಾಜದ ಸಾಂಸ್ಕೃತಿಕ ಬದುಕು ಹಸನಾಗಲು ಸಾಧ್ಯ. ಆದ್ದರಿಂದ ಪ್ರತಿಯೊಬ್ಬನಿಗೂ ಪ್ರಾಥಮಿಕ ಶಿಕ್ಷಣ ಉಚಿತವಾಗಿ ದೊರೆಯ

ಬೇಕು ಮತ್ತು ಆ ಶಿಕ್ಷಣ ಶ್ರೇಷ್ಠ ಗುಣಮಟ್ಟದ ಶಿಕ್ಷಣವಾಗಿರಬೇಕು ಎಂದು ಒತ್ತಾಯಿಸುತ್ತಿದ್ದರು. ಜೊತೆಗೆ ಸಾಮಾನ್ಯ ಜನತೆಗೆ ಶಿಕ್ಷಣ ದೊರೆಯಬೇಕಾದರೆ ಹೆಚ್ಚು ಹೆಚ್ಚು ಶಿಕ್ಷಣ ಸಂಸ್ಥೆಗಳನ್ನು ಹಳ್ಳಿಗಳಲ್ಲಿ ಪ್ರಾರಂಭಿಸಬೇಕೆಂದು ಸರ್ಕಾರದಲ್ಲಿ ಒತ್ತಡ ತರುತ್ತಿದ್ದರು. ಇಷ್ಟೇ ಅಲ್ಲದೆ ಮಕ್ಕಳಿಗೆ ತಂದೆ –ತಾಯಂದಿರು ಸ್ವಯಂ ಪ್ರೇರಿತರಾಗಿ ಶಿಕ್ಷಣವನ್ನು ಕೊಡಿಸಬೇಕು ಎಂದು ತಂದೆ - ತಾಯಂದಿರು ಈ ವಿಷಯದಲ್ಲಿ ಜಾಗೃತರಾಗಿರಬೇಕೆಂದು ಎಚ್ಚರಿಸುತ್ತಿದ್ದರು. ಉತ್ತಮ ಶಿಕ್ಷಣವನ್ನು ಹೆಚ್ಚು  ಜನರು ಪಡೆದಂತೆ ಸಮಾಜದ ಬದಲಾವಣೆ ಸಾಧ್ಯ. ಸಮಾಜದಲ್ಲಿ ಆರ್ಥಿಕ ಮತ್ತು ಸಾಮಾಜಿಕ ಸಮಾನತೆಗೆ ಶಿಕ್ಷಣ ಪೂರಕವಾಗುತ್ತದೆ. ಆದ್ದರಿಂದ ಪ್ರತಿ ಸರ್ಕಾರಗಳು ಮತ್ತು ಜನತೆ ಒಟ್ಟಾಗಿ ಶಿಕ್ಷಣದ ಪ್ರಗತಿಗೆ ಪ್ರಯತ್ನಿಸಬೇಕು ಎಂಬುವುದು ಇವರ ನಿಲುವು ಮತ್ತು ಒತ್ತಾಯವಾಗಿತ್ತು.

ಪ್ರಜಾಸತ್ತಾತ್ಮಕ ಸಮಾಜವಾದದಲ್ಲಿ ನಂಬಿಕೆ ಇಟ್ಟಿದ್ದ ಗೋಪಾಲಗೌಡರು ಮೂಲಭೂತ ಸೌಕರ್ಯಗಳು ಸಾಮಾನ್ಯ ಜನತೆಗೆ ತಲುಪಬೇಕೆಂದರೆ ಬೃಹತ್ ಉದ್ದಿಮೆಗಳನ್ನು ರಾಷ್ಟ್ರೀಕರಣ ಮಾಡಬೇಕು. ವಿತರಣೆಯ ಮೇಲೆ ಸರ್ಕಾರದ ನಿಯಂತ್ರಣವಿದ್ದು, ಸಮರ್ಪಕ ವಿತರಣೆಯಾಗು ವಂತೆ ಸೂಕ್ತ ವ್ಯವಸ್ಥೆಯನ್ನು ಮಾಡಬೇಕು. ಸಾಮಾನ್ಯ ಜನತೆಗೆ ಮೂಲಭೂತವಾದ ಸಾರಿಗೆ ಸಂಪರ್ಕ ಮತ್ತು ಬ್ಯಾಂಕುಗಳ ರಾಷ್ಟ್ರೀಕರಣ ಆಗಬೇಕು. ಹೀಗಾದಾಗ ಮಾತ್ರ ಸಾಮಾನ್ಯ ಜನತೆ ಆರ್ಥಿಕವಾಗಿ  ಪ್ರಗತಿ ಹೊಂದಲು ಸಾಧ್ಯ. ಆ ಮೂಲಕ ಸಮಾಜದಲ್ಲಿನ ಆರ್ಥಿಕ ಅಂತರವನ್ನು ಕಡಿಮೆ ಮಾಡಿ ಸಮಾನತೆ ಸಾಧಿಸಲು ಸಾಧ್ಯ. ಜೊತೆಗೆ ಪ್ರತಿಯೊಬ್ಬ ಅಂದರೆ ಸಮಾಜದ ಕಟ್ಟಕಡೆಯ ವ್ಯಕ್ತಿ ಎಂದು ಪರಿಗಣಿಸುವ ವ್ಯಕ್ತಿಯೂ ಮೂಲಭೂತ ಸೌಕರ್ಯಗಳನ್ನು ಅನುಭವಿಸಲು ಸಾಧ್ಯ. ಅದಕ್ಕೆ ಪೂರಕವಾದ ವ್ಯವಸ್ಥೆಯನ್ನು ನಿರ್ಮಾಣ ಮಾಡಿಕೊಡಬೇಕಾದುದು ಎಲ್ಲಾ ಪ್ರಜಾಸತ್ತಾತ್ಮಕ ಸರ್ಕಾರಗಳ ಜವಾಬ್ದಾರಿ ಎಂದು ಹೇಳುತ್ತಿದ್ದರು ಮತ್ತು ಈ ನಿಟ್ಟಿನಲ್ಲಿ ಬಹಳಷ್ಟು ಪ್ರಯತ್ನಗಳನ್ನು ಮಾಡಿದರು.

ಸಮಾಜವಾದ ಸಮರ್ಪಕವಾಗಿ ಅಸ್ತಿತ್ವಕ್ಕೆ ಬರಬೇಕಾದರೆ ಭ್ರಷ್ಟಾಚಾರದ ನಿರ್ಮೂಲನ ವಾಗಬೇಕು. ಅಧಿಕಾರಿಗಳು, ಆಡಳಿತಗಾರರು ಯೋಗ್ಯರು ಮತ್ತು ಪ್ರಾಮಾಣಿಕರಾಗಿರಬೇಕು. ಪ್ರತಿಯೊಬ್ಬರು ನಿಸ್ವಾರ್ಥವಾಗಿ ನಿರಂತರ ದುಡಿಮೆಯಲ್ಲಿ  ತೊಡಗಬೇಕು ಎಂದು ಹೇಳುತ್ತಿದ್ದರು. ಸಮಾಜವಾದದ ಮೂಲಮಂತ್ರವೇ 'ದುಡಿಮೆ '. ಯಾವುದೇ ವ್ಯಕ್ತಿ ಸೋಮಾರಿಯಾಗಿರದೆ

ಒಂದಲ್ಲ ಒಂದು ವಿಶಿಷ್ಟ ಕಾರ್ಯದಲ್ಲಿ ತೊಡಗಿರಬೇಕು ಎಂದು ಜನರನ್ನು ಪ್ರೇರೇಪಿಸುತ್ತಿದ್ದರು. ಒಟ್ಟಿನಲ್ಲಿ ಸಮಾಜ ಪ್ರಗತಿದಾಯಕ ಮತ್ತು ಚಟುವಟಿಕೆಯಿಂದಿರಬೇಕೆಂದರೆ ಪ್ರತಿಯೊಬ್ಬನು ಉತ್ಸಾಹಭರಿತನಾಗಿ ಪ್ರಾಮಾಣಿಕ ದುಡಿಮೆಯಲ್ಲಿ ತೊಡಗಿರಬೇಕು ಎಂಬುದು ಇವರ ಅಭಿಪ್ರಾಯ. ಜೊತೆಗೆ ಸಮಾಜವಾದ ಅನುಷ್ಠಾನಗೊಳ್ಳಬೇಕೆಂದರೆ ಈಗಿರುವ ರಾಜಧನ ಪದ್ಧತಿಯನ್ನು ರದ್ದುಗೊಳಿಸಬೇಕು. ಪರಿಹಾರವಿಲ್ಲದೆ ಭೂಮಾಲೀಕರಿಂದ ಭೂಮಿಯನ್ನು ವಶಪಡಿಸಿಕೊಳ್ಳಬೇಕು. ಮಿತಿಗಿಂತ ಹೆಚ್ಚಿನ ಆದಾಯವುಳ್ಳವರಿಗೆ ವಿಶೇಷ ತೆರಿಗೆ ವಿಧಿಸಬೇಕು. ಇಂತಹ ಹಲವಾರು ವಿಷಯಗಳ ಬಗ್ಗೆ ಚಿಂತಿಸುತ್ತಿದ್ದರು ಮತ್ತು ಈ ಕುರಿತು ಸರ್ಕಾರದ ಗಮನ ಸೆಳೆದು ಕರ್ನಾಟಕ ರಾಜ್ಯದಲ್ಲಿ ಸಮಾಜವಾದಿ ತತ್ವಗಳ ಅನುಷ್ಠಾನಕ್ಕೆ ಪ್ರೇರಕ ಶಕ್ತಿಯಾಗಿದ್ದರು.

ಹೀಗೆ ಗೋಪಾಲಗೌಡರು ಸಮಾಜವಾದಿ ಸಾಹಿತ್ಯ, ಕ್ರಾಂತಿ, ಸಾಹಿತ್ಯ, ಸಮಾಜವಾದಿ ಚಿಂತಕರನೇಕರ ಲೇಖನಗಳನ್ನು ಆಳವಾಗಿ ಮತ್ತು ನಿರಂತರವಾಗಿ ಅಭ್ಯಾಸ ಮಾಡಿರುವುದು, ಪ್ರಜಾಸತ್ತಾತ್ಮಕ ಹೋರಾಟಗಳು, ಸಮಾಜವಾದಿ ಚಿಂತಕರ, ಹೋರಾಟಗಾರರ ಪ್ರಭಾವಗಳು ಅಲ್ಲದೆ ಇವರು ಅನೇಕ ಸಮಾಜವಾದಿ ಸಭೆಗಳಲ್ಲಿ , ಸಮ್ಮೇಳನಗಳಲ್ಲಿ ಬಾಗವಹಿಸಿರುವುದು ಇಂತಹ ಹಲವಾರು ಅಂಶಗಳ ಪ್ರಭಾವದಿಂದಾಗಿ ತಮ್ಮದೇ ಆದ ಸಮಾಜವಾದಿ ತಾತ್ವಿಕ ನೆಲೆಗಟ್ಟನ್ನು ರೂಪಿಸಿಕೊಂಡರೆನ್ನಬಹುದು. ಈ ತತ್ವವನ್ನು ಗಟ್ಟಿಗೊಳಿಸಿಕೊಳ್ಳಲು ಮತ್ತು ಸಮಾಜವಾದಿ ಹೋರಾಟಕ್ಕೆ ಭದ್ರ ಬುನಾದಿಯಾದ ಐತಿಹಾಸಿಕ ಘಟನೆ ಎಂದರೆ ಕಾಗೋಡು ರೈತ ಚಳುವಳಿ. ಈ ಹೋರಾಟ ಸಮಾಜವಾದಿ ತತ್ವವನ್ನಾಧರಿಸಿ ಸಮಾಜದಲ್ಲಿ ನಡೆಯುವ ಯಾವುದೇ ವಿಧವಾದ ಅನ್ಯಾಯ, ದೌರ್ಜನ್ಯದ ವಿರುದ್ಧ ಹೋರಾಡಿ ಯಶಸ್ಸನ್ನು ಸಾಧಿಸ ಬಹುದು ಎಂಬುದನ್ನು ಖಚಿತಪಡಿಸಿತು. ಅಲ್ಲದೆ ಈ ಹೋರಾಟವೇ ಇವರ ಹೆಸರನ್ನು ರಾಷ್ಟ್ರ ಮತ್ತು ಅಂತರ ರಾಷ್ಟ್ರೀಯ ಮಟ್ಟಕ್ಕೆ ಕೊಂಡೊಯ್ಯಲು ಕಾರಣವಾಯಿತು. ಇವರ ವ್ಯಕ್ತಿತ್ವದ ಶ್ರೇಷ್ಠತೆಗೂ, ನಾಯಕತ್ವ ಉನ್ನತಿಗೂ ಪುರಾವೆಯಾಯಿತು. ಗೋಪಾಲಗೌಡರು ಶಾಸಕರಾಗಿ ಆಯ್ಕೆಯಾದುದ್ದರಿಂದ ಅನೇಕ ಸಮಾಜವಾದಿ ತತ್ವಗಳು ಸಂವಿಧಾನಬದ್ಧವಾಗಿ ಅನುಷ್ಠಾನಕ್ಕೆ ಬರಲು ಸಾಧ್ಯವಾಯಿತು ಎನ್ನಬಹುದು.

ಅಧ್ಯಾಯ -5

# ಗೋಪಾಲಗೌಡರ ಬದುಕಿನಲ್ಲಿ ಸಮಾಜವಾದಿ ತತ್ವ - ನಿಷ್ಠೆ

ಗೋಪಾಲಗೌಡರಿಗೆ ಸಮಾಜವಾದ ಕೇವಲ ಚಿಂತನೆ, ಸಿದ್ಧಾಂತ ಅಥವಾ ಒಂದು ಬೌದ್ಧಿಕ ವಿಚಾರ ಮಾತ್ರ ಆಗಿರದೆ ಅವರ ಬದುಕಿನ ವಿಧಾನ ಮತ್ತು ಶೈಲಿ ಆಗಿತ್ತು. ತಮ್ಮ ಇಡೀ ಜೀವನದಲ್ಲಿ ಅವರೆಂದೂ ತತ್ವ ಬಿಟ್ಟು ಚಿಂತಿಸಿದವರಲ್ಲ, ಮಾತನಾಡಿದವರಲ್ಲ, ಕಾರ್ಯ ನಿರ್ವಹಿಸಿದವರಲ್ಲ. ಅವರ ಪ್ರತಿಯೊಂದು ಹೆಜ್ಜೆಯಲ್ಲಿಯೂ, ನುಡಿಯಲ್ಲಿಯೂ ಸಮಾಜವಾದಿ ಸೈದ್ಧಾಂತಿಕ ಹಿನ್ನೆಲೆ ಇರುತ್ತಿತ್ತು. ಇವರು ವೈಯಕ್ತಿಕ ಮತ್ತು ಸಾರ್ವಜನಿಕ ಬದುಕಿನಲ್ಲಿ ಸಮಾಜವಾದಿ ತತ್ವಕ್ಕೆ ನಿಷ್ಠರಾಗಿ ಬದುಕಿದರು.

ಬಡತನದ ಕುಟುಂಬದಲ್ಲಿ ಜನಿಸಿದ ಗೋಪಾಲಗೌಡರು ಶಿಕ್ಷಣ ಪಡೆಯುವುದಕ್ಕಾಗಿ ತತ್ವ-ನಿಷ್ಠ ಬದುಕಿಗಾಗಿ, ಸಮಾಜದ ಏಳಿಗೆಗಾಗಿ ಕಠಿಣ ಹೋರಾಟ ಮಾಡಿದವರು. ಎಂತಹ ಕಷ್ಟದ ಕಾಲದಲ್ಲಿಯೂ ತಮ್ಮ ತತ್ವದ ಎಲ್ಲೆಯನ್ನು ಮೀರಿ ವರ್ತಿಸಲಿಲ್ಲ. ತಮ್ಮ ವಿದ್ಯಾರ್ಥಿ ಜೀವನದಲ್ಲಿಯೇ ಒಂದು ಸ್ಪಷ್ಟ ನಿರ್ದಿಷ್ಟ ಸೈದ್ಧಾಂತಿಕ ಮತ್ತು ತಾತ್ವಿಕ ನೆಲೆಗಟ್ಟನ್ನು ರೂಪಿಸಿಕೊಂಡ ಗೋಪಾಲಗೌಡರು ತಮ್ಮ ಜೀವನದುದ್ದಕ್ಕೂ ಆ ತತ್ವ -ಸಿದ್ಧಾಂತವನ್ನು ಬಿಟ್ಟು ವರ್ತಿಸಲಿಲ್ಲ. ಇಂತಹ ತತ್ವವನ್ನು ತಮ್ಮ ಜೀವನದಲ್ಲಿ ರೂಪಿಸಿಕೊಳ್ಳಲು ಮತ್ತು ತಮ್ಮ ಬದುಕಿನುದ್ದಕ್ಕೂ ಅದನ್ನು ಅನುಸರಿಸಲು ಇವರಿಗೆ ಪ್ರೇರಕವಾದ ಅಂಶಗಳೆಂದರೆ ತಮ್ಮ ಬಾಲ್ಯ ಮತ್ತು ಶಿಕ್ಷಣದ ಸಂದರ್ಭದ ಮಲೆನಾಡಿನ ಜನಜೀವನ ಪರಿಸ್ಥಿತಿ, ರಾಮಮನೋಹರ ಲೋಹಿಯಾರವರ ಜೀವನ ಶೈಲಿ ಮತ್ತು ಅವರ ತತ್ವಾದರ್ಶಗಳು ಹಾಗೂ ಭಾರತದ ಸ್ವಾತಂತ್ರ್ಯ ಹೋರಾಟದ ಹಲವಾರು ಘಟನಾವಳಿಗಳು ಮತ್ತು ಆ ಹೋರಾಟದಲ್ಲಿ ಭಾಗವಹಿಸಿದ ಹಲವಾರು ಆದರ್ಶ ವ್ಯಕ್ತಿಗಳ ತತ್ವಾದರ್ಶಗಳು ಗೋಪಾಲಗೌಡರ ಬದುಕಿನ ಮೇಲೆ ಗಾಢ ಪ್ರಭಾವ ಬೀರಿದ್ದವು. ಇಂತಹ ವಿಭಿನ್ನ ಅಂಶಗಳ ಮತ್ತು ವ್ಯಕ್ತಿಗಳ ಪ್ರಭಾವದಿಂದ ಸ್ಫೂರ್ತಿ ಪಡೆದ ಗೋಪಾಲಗೌಡರು ತಮ್ಮ ವೈಯಕ್ತಿಕ ಮತ್ತು ಸಾರ್ವಜನಿಕ ಜೀವನಕ್ಕೆ ಒಂದು ಸ್ಪಷ್ಟ ತಾತ್ವಿಕ ನೆಲೆಗಟ್ಟನ್ನು ರೂಪಿಸಿಕೊಂಡರು. ತಮ್ಮ ಪೂರ್ಣ ಬದುಕನ್ನು ಆ ತತ್ವದ ಆಧಾರದ ಮೇಲೆ ನಡೆಸಿದರು. ತಮ್ಮೆಲ್ಲ ಹೋರಾಟಗಳನ್ನು ಆ ತತ್ವದ ಆಧಾರದ ಮೇಲೆ ರೂಪಿಸಿದರು.

ಗೋಪಾಲಗೌಡರು ಸಮಾಜದಲ್ಲಿ ಗಾಢವಾಗಿ ಬೇರೂರಿದ್ದ ಅಸಮಾನತೆ, ಅಂಧಕಾರ, ಮೌಢ್ಯತೆ, ದಬ್ಬಾಳಿಕೆ ವಿರುದ್ಧ ಸಿಡಿದೆದ್ದವರು. ಇವುಗಳ ಬೆಳವಣಿಗೆಗೆ ಪೂರಕವಾದ ಸಾಮಾಜಿಕ, ಆರ್ಥಿಕ ವ್ಯವಸ್ಥೆಯನ್ನು ಕಿತ್ತು ಹಾಕಿ ಸಮಗ್ರ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆ ತರುವುದಕ್ಕಾಗಿ ಹೋರಾಡಿದರು. ಈ ಎಲ್ಲಾ ಹೋರಾಟಗಳನ್ನು ತಮ್ಮ ಜ್ಞಾನದ, ಬಡವರ ನೆರವಿನಿಂದ ಮಾಡಿದರೇ ವಿನಾ ಹಣಬಲದಿಂದಲ್ಲ. ಇವರೆಂದೂ ಹಣಕ್ಕಾಗಲಿ, ಆಸ್ತಿ - ಸಂಪತ್ತಿಗಾಗಲಿ ಜನರಲ್ಲಿ ಆಥವಾ ಸರ್ಕಾರದಲ್ಲಿ ಕೈಚಾಚಿದವರಲ್ಲ. ನಿರಂತರ ಅನ್ಯಾಯಕ್ಕೊಳಗಾದವರ ಪರ ಪ್ರಾಮಾಣಿಕವಾಗಿ ಶ್ರಮಿಸಿ ಜನನಾಯಕರಾಗಿ ಹೊರ ಹೊಮ್ಮಿದವರು. ಈಗಲೂ ಅವರ ಒಡನಾಡಿಗಳು, ಸ್ನೇಹಿತರು ''ಅವರೂ ನಮ್ಮಂತೆಯೇ ಬಡವರು ಅವರು ನಾವೂ ಒಂದೇ'' ಎಂಬ ಮಾತನ್ನು ಹೇಳುತ್ತಾರೆ. ಅಂದರೆ ರಾಜ್ಯ -ರಾಷ್ಟ್ರ ಮಟ್ಟದ ನಾಯಕರಾಗಿ ಬೆಳೆದರೂ ಯಾವುದೇ ಆಸ್ತಿ ಮತ್ತು ಸಂಪತ್ತನ್ನು ಮಾಡಲಿಲ್ಲ. ಅವರು ಕ್ಷೇತ್ರಕ್ಕೆ ಬಂದಾಗ ಸಾಮಾನ್ಯ ಜನತೆಯ ಒಡನಾಡಿಯಾಗಿ ಸರಳ ಜೀವನವನ್ನು ನಡೆಸುತ್ತಿದ್ದರು. ಇವರ ಬುದ್ಧಿಶಕ್ತಿ, ವರ್ಚಸ್ಸು ಮತ್ತು ಸಾಮರ್ಥ್ಯವನ್ನು ಹಣ ಗಳಿಸುವುದಕ್ಕೋ, ಸಂಪತ್ತು ಗಳಿಸುವುದಕ್ಕೋ ಬಳಸಿಕೊಂಡಿದ್ದರೆ ಮೂರು ತಲೆಮಾರಿಗಾಗುವಷ್ಟು ಹಣ -ಆಸ್ತಿ - ಸಂಪತ್ತನ್ನು ಮಾಡಬಹುದಿತ್ತು. ಇವರು ಇಷ್ಟಪಟ್ಟಿದ್ದರೆ ಎಂತಹ ಉನ್ನತ ಹುದ್ದೆಯನ್ನಾದರೂ ಅಲಂಕರಿಸಬಹುದಿತ್ತು. ಇವರು ವಿರೋಧ ಪಕ್ಷದಲ್ಲಿದ್ದು ಆಡಳಿತ ಪಕ್ಷಕ್ಕೆ ದಿಗ್ಬಂಧನವಾಗುತ್ತಿದ್ದ ವೈಖರಿಯನ್ನು ಸಹಿಸಲಾರದೆ ಕಾಂಗ್ರೆಸ್ ಪಕ್ಷದಿಂದ ಒಮ್ಮೆ ಮಂತ್ರಿ ಸ್ಥಾನದ ಆಮಿಷ ಬಂದಾಗ ಅದನ್ನು ಖಂಡಿತೋಕ್ತಿಯಲ್ಲಿ ತಿರಸ್ಕರಿಸಿದವರು. 1971 ರಲ್ಲಿ ಕಾಂಗ್ರೆಸ್‌ನ ಶ್ರೀಮಾನ್ ವೀರೇಂದ್ರ ಪಾಟೀಲ್ ಮುಖ್ಯಮಂತ್ರಿ ಹುದ್ದೆಗೆ ರಾಜೀನಾಮೆ ನೀಡಿದಾಗ ಉಳಿದ ಪಕ್ಷಗಳೆಲ್ಲ ಒಗ್ಗೂಡಿ ಸರ್ಕಾರ ರಚಿಸಲು ಮುಂದಾದವು. ಆ ಪಕ್ಷಗಳೆಲ್ಲವೂ ಗೋಪಾಲಗೌಡರನ್ನೇ ಮುಖ್ಯಮಂತ್ರಿಯನ್ನಾಗಿ ಮಾಡಬೇಕೆಂದು ನಿರ್ಧರಿಸಿ ಅನಾರೋಗ್ಯದಿಂದ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದ ಗೋಪಾಲಗೌಡರನ್ನು ತಾವು ಮುಖ್ಯಮಂತ್ರಿಯಾಗಬೇಕೆಂದು ಕೇಳಿಕೊಂಡರು. ಆಗ ''ಈ ನಾಡಿಗೆ ಗೋಪಾಲಗೌಡ ಮುಖ್ಯಮಂತ್ರಿ ಆಗುವ ಕಾಲ ಇನ್ನೂ ಬಂದಿಲ್ಲ. ನೀವೆಲ್ಲ ಈ ದಿಕ್ಕಿನಲ್ಲಿ ಶ್ರಮಿಸುವುದು ಹುಚ್ಚು ಪ್ರಯತ್ನ ''* ಎಂದರು. ಅಂದರೆ ಅವಕಾಶಗಳು ತಾವಾಗಿಯೇ

---

*ಜೀವಂತ ಜ್ವಾಲೆ -ಕೋಣಂದೂರು ವೆಂಕಪ್ಪ , ಲೇಖನ - ಎಸ್.ಆರ್. ಬೊಮ್ಮಾಯ್

ಬಂದರೂ ಗೋಪಾಲಗೌಡರು ಆ ಅವಕಾಶಗಳನ್ನು ಆಧಾರರಹಿತವಾಗಿ ಒಪ್ಪಿಕೊಳ್ಳದೆ ತತ್ವ ನಿಷ್ಠರಾಗಿಯೇ ಉಳಿದು ಬಿಡುತ್ತಿದ್ದರು. ಜೊತೆಗೆ ಇಂತಹ ಅವಕಾಶವನ್ನು ತನ್ನ ಹೆಸರಿಗಾಗಿಯಾಗಲಿ, ಸ್ವಾರ್ಥಕ್ಕಾಗಲಿ ಎಂದೂ ಬಳಸಿಕೊಳ್ಳಲಿಲ್ಲ.

ಗೋಪಾಲಗೌಡರು ಮೂರು ಬಾರಿ ಚುನಾವಣೆಯಲ್ಲಿ ಗೆಲುವನ್ನು ಸಾಧಿಸಿದರೂ ಯಾವುದೇ ಸನ್ಮಾನ ಸಮಾರಂಭಗಳಿಗೆ ಹೋಗಲಿಲ್ಲ. ಚುನಾವಣೆಯಲ್ಲಿ ಗೆದ್ದಾಗಲೆಲ್ಲ ಅಭಿಮಾನಿಗಳ ಮಹಾಪೂರವೇ ಹರಿದುಬಂದು ಸನ್ಮಾನ ಸಮಾರಂಭಗಳನ್ನು ಏರ್ಪಡಿಸಬೇಕೆಂದು ಕೇಳಿಕೊಂಡಾಗ ಅದನ್ನು ಅವರು ಒಪ್ಪಿಕೊಳ್ಳುತ್ತಿರಲಿಲ್ಲ. ಕಾರಣ ಅವರೆಂದೂ ಹೆಸರಿಗಾಗಿ ಅಥವಾ ಹೊಗಳಿಕೆಗೆ ಇಷ್ಟಪಟ್ಟವರಲ್ಲ. ಆ ಸನ್ಮಾನ ಸಮಾರಂಭಗಳಲ್ಲಿ ಆಗುವ ವೆಚ್ಚ ಮತ್ತು ಸಮಯವನ್ನು ಬಡವರ ಸೇವೆಗೆ ಬಳಸಿಕೊಂಡರೆ ಬಡವರ ಪ್ರಗತಿ ಸಾಧಿಸಲು ಸಾಧ್ಯ ಎಂದು ಹೇಳುತ್ತಿದ್ದರು. ನಿರಂತರ ಶ್ರಮಕ್ಕೆ , ದುಡಿಮೆಗೆ ಮಹತ್ವ ನೀಡುತ್ತಿದ್ದ ಗೋಪಾಲಗೌಡರು ದುಡಿಯದೆ ಸೋಂಬೇರಿಗಳಾದವರನ್ನು ಮೈಗಳ್ಳರನ್ನು ಎಂದೂ ಹತ್ತಿರ ಸೇರಿಸುತ್ತಿರಲಿಲ್ಲ. ಅಂತಹ ವ್ಯಕ್ತಿಗಳನ್ನು ನಿಷ್ಠೂರವಾಗಿಯೇ ಕಾಣುತ್ತಿದ್ದರು. ತಮ್ಮ ತತ್ವಕ್ಕೆ ಬದ್ಧರಾದವರಿಗೆ ಮಾತ್ರ ಅವರಲ್ಲಿ ಅವಕಾಶವಿರುತ್ತಿತ್ತು. ಈಗಿನ ರಾಜಕಾರಣಿಗಳ ಹಾಗೆ ಯಾವುದೋ ಆಸೆ - ಆಮಿಷಗಳನ್ನೊಡ್ಡಿ ಜನರನ್ನು ಆಕರ್ಷಿಸುವ ಕಾರ್ಯವನ್ನು ಎಂದೂ ಮಾಡಲಿಲ್ಲ. ತತ್ವ - ನಿಷ್ಠೆಯನ್ನು ಬಿಟ್ಟು ಪೊಳ್ಳು ಆಶ್ವಾಸನೆಗಳನ್ನು ನೀಡಿ ಜನರನ್ನು ಮೋಸಗೊಳಿಸುವ ಕಾರ್ಯವನ್ನೆಂದೂ ಮಾಡಲಿಲ್ಲ. ಅವರು ನೇರ ನಡೆ -ನುಡಿಗೆ ಹೆಸರಾಗಿದ್ದರು. ಸಮಾಜವಾದವೇ ಅವರ ಜೀವಾಳವಾಗಿತ್ತು. ಆತ್ಮಪೂರ್ವಕವಾಗಿ ಈ ತತ್ವವನ್ನು ಒಪ್ಪಿ ಬಂದವರಿಗೆ ಮಾತ್ರ ಅವಕಾಶ ನೀಡುತ್ತಿದ್ದರು. ನಿಷ್ಠೂರವಾದಿಯಾಗಿದ್ದು ಯಾವುದೇ ಸಂದರ್ಭದಲ್ಲಿ ತಮ್ಮ ತತ್ವಕ್ಕೆ ವಿರುದ್ಧವಾದ, ಸಮಾಜ, ನಾಡು ನುಡಿಗೆ ವಿರುದ್ಧವಾದ ಯಾವುದೇ ವಿಚಾರವನ್ನು ಸಹಿಸುತ್ತಿರಲಿಲ್ಲ. ಒಮ್ಮೆ ರಾಜ್ಯಪಾಲರು ವಿಧಾನಸಭೆಯಲ್ಲಿ ಇಂಗ್ಲಿಷ್‌ನಲ್ಲಿ ಭಾಷಣ ಮಾಡಿದ್ದಕ್ಕಾಗಿ ಆಕ್ರೋಶಗೊಂಡ ಗೋಪಾಲಗೌಡರು ಅವರ ಎದುರಿನಲ್ಲಿಯೇ ಆ ಭಾಷಣದ ಪ್ರತಿಯನ್ನು ಹರಿದು ಹಾಕಿ ಕಾಲಿನಿಂದ ತುಳಿದುದನ್ನು ನೆನಪಿಸಿಕೊಳ್ಳಬಹುದು. ಹಾಗೆಯೇ ಒಮ್ಮೆ ಗೇಣಿದಾರರ ವಿಷಯ ಕುರಿತ ಒಬ್ಬ ಸದಸ್ಯರ ಪ್ರಶ್ನೆಗೆ ಪೂರಕವಾಗಿ ಉಪ ಪ್ರಶ್ನೆಗೆ ಅವಕಾಶ ಕೊಡಬೇಕೆಂದು ಕೇಳಿಕೊಂಡರು. ಆದರೆ ಸಭಾಧ್ಯಕ್ಷರಾದ

ಕೊಠಾವಳೆಯವರು ಅವಕಾಶ ನೀಡಲಿಲ್ಲ. ಆಗ ಇಡೀ ವಿರೋಧ ಪಕ್ಷವೇ ಎದ್ದು ನಿಂತು ಅವಕಾಶ ನೀಡಬೇಕೆಂದು ಕೇಳಿಕೊಂಡಿತು. ಆದರೂ ಅವಕಾಶ ಕೊಡದಿದ್ದಾಗ ಸಿಟ್ಟಾದ ಗೌಡರು ಧ್ವನಿವರ್ಧಕವನ್ನು ಕಿತ್ತು ಸಭಾಧ್ಯಕ್ಷರ ಎದುರಿಗೆ ಎಸೆದಿದ್ದರು. ಅಂದರೆ ಯಾವ ವ್ಯಕ್ತಿ , ಯಾವ ಸ್ಥಳ ಎಂಬುದನ್ನು ಲೆಕ್ಕಿಸದೆ ತತ್ವಕ್ಕೆ ವಿರುದ್ಧವಾದ ನಾಡು -ನುಡಿಗೆ ವಿರುದ್ಧವಾದ ಯಾವುದೇ ವಿಷಯವನ್ನು ಸಹಿಸದೆ ನೇರವಾಗಿ ಮತ್ತು ದಿಟ್ಟವಾಗಿ ತಕ್ಷಣದಲ್ಲಿ ವಿರೋಧಿಸುವ, ಪ್ರತಿಕ್ರಿಯಿಸುವ ಮನೋವೃತ್ತಿಯನ್ನು ಹೊಂದಿದ್ದರು. ಇವರಿಗೆ ತತ್ವ ನಿಷ್ಠೆ ಮುಖ್ಯವೇ ವಿನಾ ವ್ಯಕ್ತಿ, ಕಾಲ ಇನ್ನ್ಯಾವುದೇ ಅಂಶಗಳು ಮುಖ್ಯವಾಗಿ ಕಾಣುತ್ತಿರಲಿಲ್ಲ. ತತ್ವನಿಷ್ಠೆಗಾಗಿ ಎಂತಹ ತ್ಯಾಗಕ್ಕೂ ಸಿದ್ಧರಿದ್ದರು.

ತಮ್ಮ ಜೀವನದಲ್ಲಿ ಸಮಾಜವಾದಿ ತತ್ವಗಳನ್ನು ರೂಪಿಸಿಕೊಂಡ ಮೇಲೆ ತಮ್ಮ ವೈಯಕ್ತಿಕ ಬದುಕಿಗಿಂತ ಅಂದಿನ ಸಮಾಜದಲ್ಲಿನ ಅನ್ಯಾಯ ಮತ್ತು ಶೋಷಣೆಗಳೇ ಮುಖ್ಯವಾಗಿ ಕಂಡದ್ದರಿಂದ ವಿದ್ಯಾರ್ಥಿ ಜೀವನದಲ್ಲಿಯೇ ತಮ್ಮ ವಿದ್ಯಾಭ್ಯಾಸವನ್ನು ತೊರೆದು ದೇಶದ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದರಲ್ಲದೆ ಸಮಾಜದಲ್ಲಿ ನಡೆಯುತ್ತಿದ್ದ ದಬ್ಬಾಳಿಕೆ ಮತ್ತು ಅಸಮಾನತೆಯನ್ನು ನಿವಾರಿಸುವ ಕಾರ್ಯ ಚಟುವಟಿಕೆಯಲ್ಲಿ ತೊಡಗಿಕೊಂಡಿದ್ದರು. ಇಂತಹ ಚಟುವಟಿಕೆಗಳಲ್ಲಿ ಪಾಲ್ಗೊಳ್ಳದೆ ಶಿಕ್ಷಣವನ್ನು ಮುಂದುವರಿಸಿದ್ದರೆ ಯಾವುದೇ ಉನ್ನತ ಹುದ್ದೆಯ ನೌಕರಿಯನ್ನು ಪಡೆದುಕೊಳ್ಳಬಹುದಿತ್ತು. ಆದರೆ ತನ್ನ ಉನ್ನತಿಗಿಂತ ತನ್ನ ಶ್ರೇಯಸ್ಸಿಗಿಂತ ಸಮಾಜದಲ್ಲಿ ಸಂಕಷ್ಟಕ್ಕೊಳಗಾದವರ, ಕಡುಬಡವರ ಸಮಸ್ಯೆಗಳೇ ಮುಖ್ಯವಾಗಿ ಕಂಡದ್ದರಿಂದ ಈ ಸಮಸ್ಯೆಗಳ ನಿವಾರಣೆಗೆ ಮೊದಲ ಪ್ರಾಶಸ್ತ್ಯವನ್ನು ನೀಡಿದರು. ಅಂತೆಯೇ ಸಮಾಜವಾದಿ ತತ್ವವನ್ನಾಧರಿಸಿ ನಡೆಸಿದ ಐತಿಹಾಸಿಕ ''ಕಾಗೋಡು ಚಳುವಳಿ '' ಯಲ್ಲಿಯೂ ಇವರು ತಮ್ಮ ಸಮಾಜವಾದಿ ತತ್ವಗಳನ್ನು ಆಚರಣೆಗೆ ತರುವ ಬಲವಾದ ಪ್ರಯತ್ನ ಮಾಡಿದರು. ರೈತರ ಹೋರಾಟವನ್ನು ಸಮಾಜವಾದಿ ನಾಯಕರ ನೇತೃತ್ವದ ಹೋರಾಟವನ್ನಾಗಿ ಪರಿವರ್ತಿಸಿ ಸಮಾಜವಾದದ ಶಕ್ತಿಯನ್ನು ತೋರಿಸಿಕೊಟ್ಟರು. ಆ ಸಂದರ್ಭದಲ್ಲಿ ವೈಯಕ್ತಿಕ ಹಿತಾಸಕ್ತಿಗೆ ಒಳಗಾಗದೆ ಜೀವ ಭಯವನ್ನು ತೊರೆದು ಮುನ್ನುಗ್ಗಿದರು ಹಾಗೂ ಜೈಲು ವಾಸವನ್ನು ಅನುಭವಿಸಿದರು. ಅಂದರೆ ಇಲ್ಲಿಯೂ ಯಾವುದೇ ನಾಯಕತ್ವ ಆಸೆಯಿಂದಲೋ ಅಥವಾ

ಹೆಸರಿಗಾಗಿಯೋ ಹೋರಾಟದ ನೇತೃತ್ವವನ್ನು ವಹಿಸದೆ ರೈತರಿಗಾಗುತ್ತಿದ್ದ ಅನ್ಯಾಯ, ದಬ್ಬಾಳಿಕೆ ಹಿಂಸೆಯ ವಿರುದ್ಧ ಪ್ರಾಮಾಣಿಕವಾಗಿ ಮತ್ತು ನಿಸ್ವಾರ್ಥತೆಯಿಂದ ಕಾರ್ಯಕ್ರಮವನ್ನು ನಿರೂಪಿಸಿ ಆ ಹೋರಾಟಕ್ಕೆ ಎಲ್ಲಿಯೂ ಹಿನ್ನಡೆಯಾಗದಂತೆ ನೋಡಿಕೊಳ್ಳುವುದರ ಮೂಲಕ ಸಹಜವಾಗಿಯೇ ರೈತರ ಒಡನಾಡಿ ನಾಯಕರಾಗಿ ಹೊರಹೊಮ್ಮಿದರು.

ಗೋಪಾಲಗೌಡರು ತಮ್ಮ ವೈಯಕ್ತಿಕ ಬದುಕನ್ನು ಸಮಾಜವಾದಕ್ಕೆ ಮೀಸಲಿಟ್ಟು ಆ ತತ್ವಕ್ಕೆ ಬದ್ಧರಾಗಿ ನಡೆದುಕೊಂಡರು. ಅವರ ವಿಶಿಷ್ಟವಾದ ಜ್ಞಾನ, ಅಸಾಧ್ಯ ಬುದ್ಧಿವಂತಿಕೆಯಿಂದ ಆಸ್ತಿ ಮತ್ತು ಸಂಪತ್ತನ್ನು ಗಳಿಸಬಹುದಿತ್ತು. ಆದರೆ ತಮ್ಮ ಬುದ್ಧಿಶಕ್ತಿ ಮತ್ತು ದೇಹದ ಶಕ್ತಿಗಳೆರಡನ್ನು ಅಸಮಾನತೆ, ಅಂಧಕಾರದಿಂದ ಕೂಡಿದ ಸಮಾಜವನ್ನು ಸಮಾನತೆಯ ಸ್ವಸ್ತ ಸಮಾಜವಾದಿ ಸಮಾಜವನ್ನಾಗಿ ಮಾರ್ಪಡಿಸಲು ಬಳಸಿಕೊಂಡರು. ಇವರು ಬಡತನದಲ್ಲಿಯೇ ಹುಟ್ಟಿ ಬಡತನದಲ್ಲಿಯೇ ಬದುಕಿ ಬಡತನದಲ್ಲಿಯೇ ಕೊನೆಯುಸಿರೆಳೆದರು. ಸಮಾಜವಾದಿ ಪಕ್ಷದ ನಾಯಕರಾಗಿಯಾಗಲಿ, ಶಾಸಕರಾಗಿಯಾಗಲಿ ಯಾವುದೇ ವೇದಿಕೆ ಅಥವಾ ಅಧಿಕಾರವನ್ನು ಸ್ವಂತಕ್ಕಾಗಿ, ಸ್ವಾರ್ಥಕ್ಕಾಗಿ ಬಳಸಿಕೊಂಡವರಲ್ಲ. ಹಾಗೆಯೇ ರಾಜ್ಯಾಧಿಕಾರವನ್ನು ಸ್ವಾರ್ಥಕ್ಕಾಗಿ ಬಳಸಿಕೊಳ್ಳುವವರನ್ನು ಕಂಡರೆ ಅದನ್ನು ಸಹಿಸುತ್ತಿರಲಿಲ್ಲ. ನೇರವಾಗಿ ಅದನ್ನು ಎದುರಿಸುವ ಕಾರ್ಯದಲ್ಲಿ ತೊಡಗುತ್ತಿದ್ದರು. ಆದ್ದರಿಂದಲೇ ಇವರು ಶಾಸಕರಾದ ಸಂದರ್ಭದಲ್ಲಿ ಸರ್ಕಾರಕ್ಕೆ ಸಿಂಹಸ್ವಪ್ನವಾಗಿದ್ದರು. ಇವರು ತಮ್ಮೆಲ್ಲ ವೈಯಕ್ತಿಕ ಸುಖಭೋಗಗಳನ್ನು ತೊರೆದು ದೀನದಲಿತರ ಉಜ್ವಲ ಭವಿಷ್ಯಕ್ಕಾಗಿ ತಮ್ಮ ದೇಹವನ್ನು ಗಂಧದ ಕೊರಡಿನಂತೆ ತೇದಿದ್ದಾರೆ. ಅವರು ನಿರಂತರವಾಗಿ ಸಾಮಾನ್ಯ ಜನರೊಡನೆ ಮಿಳಿತವಾಗಿ ಅವರಲ್ಲಿ ಒಬ್ಬರಾಗಿ ಬದುಕಿದ್ದರಿಂದಲೇ ಅವರು ದೀರ್ಘ ಕಾಲದವರೆಗೆ ವಿವಾಹ ಆಗದೆ ಉಳಿದರು. ವಿವಾಹ ಆಯಿತೆಂದರೆ ಸಾಂಸಾರಿಕ ಜೀವನದ ಹಲವಾರು ಸಮಸ್ಯೆಗಳು ತನ್ನ ಸಾರ್ವಜನಿಕ ಕಾರ್ಯಕ್ರಮಗಳಿಗೆ ಅಡ್ಡಿಪಡಿಸಬಹುದು ಎಂಬ ಉದ್ದೇಶದಿಂದಲೇ ದೀರ್ಘಕಾಲದ ನಂತರ ಸ್ನೇಹಿತರ ಸಾರ್ವಜನಿಕ ಒತ್ತಾಯಕ್ಕೆ ಮಣಿದು ವಿವಾಹವಾದರು.

ತಮ್ಮ ಸಮಾಜವಾದಿ ತತ್ವ -ನಿಷ್ಠೆ ವಿವಾಹದ ಸಂದರ್ಭದಲ್ಲಿಯೂ ಆಚರಿಸಲ್ಪಟ್ಟಿವೆ.

ಇವರು ವಧುವನ್ನು ನೋಡಲು ಹೋದಾಗ ತನ್ನ ಪರಿಸ್ಥಿತಿಯನ್ನು ನೇರವಾಗಿಯೇ ಹೀಗೆ ಹೇಳಿಕೊಂಡರಂತೆ. ನಾನು ನಿರಂತರ ಸಾರ್ವಜನಿಕ ಕಾರ್ಯಗಳಲ್ಲಿ ತೊಡಗಿಕೊಂಡಿರುತ್ತೇನೆ. ನನ್ನ ಹತ್ತಿರ ಆಸ್ತಿ ಇಲ್ಲ, ಹಣವಾಗಲಿ, ಸಂಪತ್ತಾಗಲಿ ಇಲ್ಲ, ಉತ್ತಮ ಮನೆಯಿಲ್ಲ, ಸಂಸಾರದಲ್ಲಿ ಅಕ್ಕಿ, ಕಾಳು, ಬೇಳೆ, ಮೆಣಸು ಇಲ್ಲ ಎಂದು ದಿನಾಲೂ ನನ್ನನ್ನು ಕಾಡುವುದಾದರೆ ಕಷ್ಟ ಎಂದು ತನ್ನ ಪರಿಸ್ಥಿತಿಯನ್ನು ಹೇಳಿಕೊಂಡು ಇವೆಲ್ಲವನ್ನು ಒಪ್ಪಿ ಇವುಗಳೆಲ್ಲದರ ನಡುವೆ ಸಂಸಾರ ನಡೆಸುತ್ತೇನೆನ್ನುವುದಾದರೆ ಮದುವೆಗೆ ಒಪ್ಪಿಗೆ ಇದೆ ಎಂಬ ಮಾತನ್ನು ನೇರವಾಗಿಯೇ ಹೇಳಿರುವುದು. ಹಾಗೆಯೇ ಮದುವೆಗೆ ಆಹ್ವಾನ ಪತ್ರಿಕೆಯನ್ನು ಮಾಡಿಸದೆ ಕೇವಲ ಆತ್ಮೀಯ ಸ್ನೇಹಿತರಿಗೆ ಮಾತ್ರ ವಿಷಯ ತಿಳಿಸಿ ಸರಳ ವಿವಾಹವಾದರು. ಜೊತೆಗೆ ಜಾತಿ ವ್ಯವಸ್ಥೆಯನ್ನು ಹೋಗಲಾಡಿಸಿ ಜಾತಿ ಮತ್ತು ವರ್ಗರಹಿತ ಸಮಾಜ ಸ್ಥಾಪಿಸಲು ಹೊರಟಿರುವ ಗೋಪಾಲಗೌಡರು ಅಂತರ ಜಾತಿ ವಿವಾಹ ಆಗುವುದರ ಮೂಲಕ ತಮ್ಮ ಸಮಾಜವಾದಿ ತತ್ವ -ನಿಷ್ಠೆಯನ್ನು ತೋರ್ಪಡಿಸಿದ್ದಾರೆ.

ಮದುವೆಯ ನಂತರವೂ ತಮ್ಮದೇ ಆದ ಸ್ವಂತ ಮನೆಯನ್ನು ಮಾಡದೆ ಬೆಂಗಳೂರಿನಲ್ಲಿ ಶಾಸಕರ ಭವನದಲ್ಲಿಯೇ ಕೆಲವು ವರ್ಷಗಳನ್ನು ಕಳೆದರು. ನಂತರ ಮಗಳು ಜನಿಸಿದ ಮೇಲೆ ಸಾಮಾನ್ಯ ಬಾಡಿಗೆ ಮನೆಯಲ್ಲಿಯೇ ತಮ್ಮ ಸಾಂಸಾರಿಕ ಜೀವನವನ್ನು ಕಳೆದರು. ಶಾಸಕರಾಗಿ ತನ್ನೆಲ್ಲ ಸಮಯವನ್ನು ಶ್ರಮವನ್ನು ಸಮಾಜದ ಅಭಿವೃದ್ಧಿಗಾಗಿ ಕಳೆದರು. ಆ ಸಂದರ್ಭದಲ್ಲಿಯೂ ತನ್ನ ಸಂಸಾರಕ್ಕಾಗಿ ಆಸ್ತಿ, ಸಂಪತ್ತು ಮಾಡುವುದಿರಲಿ ತನ್ನದೆನ್ನುವ ಒಂದು ಚಿಕ್ಕ ಮನೆಯನ್ನು ಮಾಡಿಕೊಳ್ಳಲಿಲ್ಲ, ಸಂಸಾರಿಯಾದ ಮೇಲೂ ಮನೆಯಲ್ಲಿ ಹೆಚ್ಚಿನ ಕಾಲ ಕಳೆಯದೆ ನಿರಂತರವಾಗಿ ಜನರ ನಡುವೆಯೇ ಇದ್ದು ಜನತೆಯ ಕಷ್ಟಗಳಿಗೆ ಸ್ಪಂದಿಸುವುದೇ ಮುಖ್ಯ ಧ್ಯೇಯವಾಗಿತ್ತೇ ವಿನಾ ಸಂಸಾರದ ಕಡೆಗೆ ಹೆಚ್ಚು ಗಮನ ಕೊಡುತ್ತಿರಲಿಲ್ಲ, ಹೀಗಾಗಿ ಸಂಸಾರದ ಪೂರ್ಣ ಜವಾಬ್ದಾರಿಯನ್ನು ಪತ್ನಿಯಾದ ಸೋನಕ್ಕನವರೇ ನಿಭಾಯಿಸಬೇಕಾಗುತ್ತಿತ್ತು. ತಾನು ಸಂಸಾರಕ್ಕೆ ಕೊಡುವುದಿರಲಿ, ಬಹಳಷ್ಟು ಸಂದರ್ಭಗಳಲ್ಲಿ ಜನರು ಕಷ್ಟ ಎಂದು ಬಂದಾಗ ತನ್ನ ಪತ್ನಿಯ ದುಡಿಮೆಯ ಹಣವನ್ನೇ ನೀಡುವುದರ ಮೂಲಕ ಬಡವರ ಬಗೆಗಿನ ಕಾಳಜಿಯನ್ನು ವ್ಯಕ್ತಪಡಿಸುತ್ತಿದ್ದರು.

ಗೋಪಾಲಗೌಡರು ಸಾರ್ವಜನಿಕ ಜೀವನವನ್ನು ಪ್ರಾರಂಭಿಸಿದಾಗಿನಿಂದ ತನ್ನದೆನ್ನುವ ಹಣ ಅಥವಾ ಆಸ್ತಿಯನ್ನು ಮಾಡದೆ ನಿರಂತರವಾಗಿ ತಮ್ಮ ಸ್ನೇಹಿತರ, ಬೆಂಬಲಿಗರ ಸಹಾಯ - ಸಹಕಾರದಿಂದ ಬದುಕಿದರು. ತಾವು ಉಡುವ ಬಟ್ಟೆಯಾಗಿರಬಹುದು, ಸೇದುವ ಸಿಗರೇಟ್ ಆಗಿರಬಹುದು, ತಾವು ಸಂಚರಿಸುವ ಪ್ರಯಾಣದ ವೆಚ್ಚ ಆಗಿರಬಹುದು ಇವೆಲ್ಲವೂ ಸ್ನೇಹಿತರು ಮತ್ತು ಅಭಿಮಾನಿಗಳಿಂದ ಪಡೆದವುಗಳೇ ಆಗಿರುತ್ತಿದ್ದವು. ಜೊತೆಗೆ ಊಟ -ಉಪಹಾರವನ್ನು ಸಹ ತಾವು ಎಲ್ಲಿ ಹೋಗುತ್ತಿದ್ದರೋ ಅಲ್ಲಿಯೇ ಯಾರದ್ದಾದರು ಮನೆಯಲ್ಲಿ ಮುಗಿಸುತ್ತಿದ್ದರು. ಊಟ -ಉಪಹಾರಕ್ಕೆ ಜಾತಿ -ನೀತಿ ಎಂಬ ತಾರತಮ್ಯವಿಲ್ಲದೆ ಯಾರದೇ ಮನೆಯಲ್ಲಿ ಊಟ ಮಾಡುವ ಮತ್ತು ತಾವು ಹೋದಲ್ಲೇ ಯಾರದೇ ಮನೆಯಲ್ಲಿ ಉಳಿದುಕೊಳ್ಳುತ್ತಿದ್ದರು. ತಮ್ಮ ಜೇಬಿನಲ್ಲಿ ಹಣವಿರುತ್ತಿರಲಿಲ್ಲವಾದ ಕಾರಣ ಎಷ್ಟೋ ದಿನಗಳನ್ನು ಉಪವಾಸವಿದ್ದೇ ಕಳೆದಿರುವುದು ಉಂಟು. ತಮ್ಮ ಬಟ್ಟೆಯನ್ನು ತಾವೇ ತೊಳೆದುಕೊಂಡು ತಾವೇ ಇಸ್ತ್ರಿ ಮಾಡಿಕೊಳ್ಳುತ್ತಿದ್ದರು. ಕಾರಣ ದೋಬಿಗೆ ಕೊಡಲು ಅವರಲ್ಲಿ ಹಣ ಇರುತ್ತಿರಲಿಲ್ಲ. ಶಾಸಕರಾಗಿದ್ದಾಗ ಯಾವುದೇ ಸರ್ಕಾರಿ ವಾಹನ ಅಥವಾ ಬಂಗಲೆಗಳನ್ನು ಖಾಸಗೀ ವಿಚಾರಕ್ಕೆ ಬಳಸಿಕೊಳ್ಳುತ್ತಿರಲಿಲ್ಲ. ಒಮ್ಮೆ ಗೋಪಾಲಗೌಡರು ತಮ್ಮ ಹೆಂಡತಿ, ಮಕ್ಕಳ ಜೊತೆ ಕೆಮ್ಮಣ್ಣುಗುಂಡಿಗೆ ಖಾಸಗಿಯಾಗಿ ಹೋಗಿದ್ದರು. ಆಗ ಅಲ್ಲಿ ಆಗಿನ ಮುಖ್ಯಮಂತ್ರಿಗಳಾಗಿದ್ದ ಎಸ್. ನಿಜಲಿಂಗಪ್ಪನವರೂ ಬಂದಿದ್ದರು. ಆಗ ನಿಜಲಿಂಗಪ್ಪನವರು ನೀವೇಕೆ ಇಲ್ಲಿದ್ದೀರಿ, ನಾನಿರುವ ಕಾಟೇಜಿನಲ್ಲಿಯೇ ಉಳಿದುಕೊಳ್ಳಬಹುದಿತ್ತೆಂದು ಹೇಳಿದಾಗ ನೀವು ಮುಖ್ಯಮಂತ್ರಿಗಳು, ನಾನೊಬ್ಬ ಸಾಮಾನ್ಯ ಶಾಸಕ, ಅದರಲ್ಲಿಯೂ ಇದೊಂದು ಖಾಸಗೀ ಭೇಟಿ ಎಂದು ಹೇಳಿ ಮುಖ್ಯಮಂತ್ರಿಗಳ ಆಹ್ವಾನವನ್ನು ತಿರಸ್ಕರಿಸಿದರು.* ಅಂದರೆ ಇವರು ಯಾವುದೇ ಸಂದರ್ಭದಲ್ಲಿಯೂ ಸರ್ಕಾರಿ ಅಧಿಕಾರ, ಹಣ ಅಥವಾ ಇನ್ನಾವುದೇ ಸೌಲಭ್ಯಗಳನ್ನು ಖಾಸಗೀ ವಿಚಾರಕ್ಕೆ ಬಳಸಿಕೊಂಡವರಲ್ಲ.

ತಾವು ನಾಲ್ಕು ಬಾರಿ ಚುನಾವಣೆಗೆ ಸ್ಪರ್ಧಿಸಿದಾಗಲೂ ಠೇವಣಿ ಕಟ್ಟಲು ಹಣವಿಲ್ಲದೆ ಅಭಿಮಾನಿಗಳು ನೀಡಿದ ಹಣದಿಂದ ಠೇವಣಿ ಕಟ್ಟುತ್ತಿದ್ದರು. ಚುನಾವಣಾ ಪ್ರಚಾರವನ್ನು

---

*ನೆನಪಿನ ಸಂಪುಟ - ಸಂಪಾದಕರು - ಕಾಳೇಗೌಡ ನಾಗವಾರ, ಲೇಖನ : ನೇರ ನಡೆ -ನುಡಿ ನೇತಾರ - ಹೆಚ್.ಎಸ್. ಸೂರ್ಯನಾರಾಯಣ.

ಬಹುತೇಕ ಕಾಲು ನಡಿಗೆಯಲ್ಲಿಯೇ ಮನೆ ಮನೆಗೆ ತಿರುಗಿ ಮಾಡುತ್ತಿದ್ದರು. ಉಳಿದಂತೆ ತಮ್ಮ ಅಭಿಮಾನಿಗಳು ನೀಡಿದ ಒಂದೆರಡು ವಾಹನಗಳನ್ನು ಮಾತ್ರ ಬಳಸುತ್ತಿದ್ದರು. ಒಟ್ಟಿನಲ್ಲಿ ಅವರ ಚುನಾವಣಾ ವೆಚ್ಚ ಕೇವಲ ಎರಡರಿಂದ ಮೂರು ಸಾವಿರ ರೂಪಾಯಿಗಳು ಎಂದು ಅಂದಾಜು ಮಾಡಲಾಗಿದೆ. ಈಗಿನ ಚುನಾವಣಾ ಪ್ರಚಾರ ಮತ್ತು ಮಾಡುವ ವೆಚ್ಚವನ್ನು ಆಗಿನ ಅವರ ಚುನಾವಣೆಗೆ ಹೋಲಿಸುವುದಿರಲಿ, ಅವರ ಚುನಾವಣಾ ಪ್ರಚಾರದ ವೈಖರಿಯನ್ನು ಊಹೆ ಮಾಡಿಕೊಳ್ಳುವುದು ಕಷ್ಟವಾಗಬಹುದು. ಗೋಪಾಲಗೌಡರು ಅಲ್ಪ ಹಣವನ್ನು ವೆಚ್ಚ ಮಾಡಿದರು, ಆ ಹಣ ತಮ್ಮ ಸ್ವಂತದ್ದಾಗಿರದೆ ಪಕ್ಷದ ಅಭಿಮಾನಿಗಳಿಂದ ಸಂಗ್ರಹಿಸುತ್ತಿದ್ದರಲ್ಲದೆ ಹಲವು ಸಂದರ್ಭಗಳಲ್ಲಿ ಕಾಂಗ್ರೆಸ್ ಪಕ್ಷದ ಬೆಂಬಲಿಗರಿಂದಲೂ ಹಣವನ್ನು ಸಂಗ್ರಹಿಸುತ್ತಿದ್ದರು. ಈ ಸಂದರ್ಭದಲ್ಲಿ ಮೇಗರವಳ್ಳಿ ಶೇಷಪ್ಪ ಹೆಗಡೆಯವರು ಹೇಳಿದ ಒಂದು ಮಾತನ್ನು ನೆನಪಿಸಿಕೊಳ್ಳಬೇಕಾಗುತ್ತದೆ. ಗೋಪಾಲಗೌಡರು ಚುನಾವಣಾ ಸಂದರ್ಭದಲ್ಲಿ ಶ್ರೀಮಂತರಿಂದ ಹಣ ಸ್ರಂಹಿಸುವಾಗ ''ಹಣ ನಿಮ್ಮದು ಓಟು ಬಡವರದ್ದು '' ನಮಗೆ ಹಣವನ್ನು ಕೊಡಿ ಎಂದು ನೇರವಾಗಿಯೇ ಕೇಳುತ್ತಿದ್ದರು ಎಂದು ಹೇಳುತ್ತಾರೆ. ಅಂದರೆ ಯಾವ ಕಾಲದಲ್ಲಿಯೂ ಬಡವರನ್ನು ಇಕ್ಕಟ್ಟಿನಲ್ಲಿ ಸಿಲುಕಿಸದೆ ಉಳ್ಳವರಿಂದಲೇ ಅಗತ್ಯವಾದದ್ದನ್ನು ಪಡೆದುಕೊಳ್ಳುತ್ತಿದ್ದರು. ಆ ಸಂದರ್ಭದಲ್ಲಿ ಪಕ್ಷಾತೀತವಾಗಿ ನಡೆದುಕೊಳ್ಳುತ್ತಿದ್ದರು.

ಗೋಪಾಲಗೌಡರು ಅಧಿಕಾರದ ಆಸೆಗಾಗಿಯಾಗಲಿ, ಹಣ ಗಳಿಸುವುದಕ್ಕಾಗಿಯಾಗಲಿ, ಹೆಸರು ಗಳಿಸುವುದಕ್ಕಾಗಿಯಾಗಲಿ ಚುನಾವಣೆಗಳಲ್ಲಿ ಸ್ಪರ್ಧಿಸಲಿಲ್ಲ. ಬಡ ಜನತೆಯ ಸೇವೆಗಾಗಿ, ಸಮಾಜದ ಆಮೂಲಾಗ್ರ ಬದಲಾವಣೆಯ ಉದ್ದೇಶದಿಂದ ಸ್ಪರ್ಧಿಸಿದ ಇವರು ದೀನದಲಿತರ, ಬಡವರ, ಶೋಷಿತರ ಬೆಂಬಲದಿಂದ ಸ್ಪರ್ಧಿಸಿ ನಾಲ್ಕು ಚುನಾವಣೆಗಳಲ್ಲಿ ಮೂರರಲ್ಲಿ ಗೆಲುವನ್ನು ಸಾಧಿಸಿದರು. ಶಾಸನ ಸಭೆಗೆ ಆಯ್ಕೆ ಆದ ಮೇಲೆ ಆ ಅವಕಾಶವನ್ನು ಸಮರ್ಪಕವಾಗಿ ಬಳಸಿಕೊಂಡು ಸಮಾಜವಾದವನ್ನು ವ್ಯಾಪಕವಾಗಿ ಅನುಷ್ಠಾನಗೊಳಿಸಲು ಪ್ರಯತ್ನಿಸಿದರು. ಮತ್ತು ತಮ್ಮ ಜೀವನವನ್ನು ಅದಕ್ಕಾಗಿಯೇ ಅರ್ಪಿಸಿಕೊಂಡರು. ಅವರ ಅರ್ಪಣಾ ಭಾವದ ಸೇವೆಯನ್ನು ಎ.ಆರ್. ಬದರಿನಾರಾಯಣ್ ಹೀಗೆ ಹೇಳುತ್ತಾರೆ.

ಜನಗಳಿಗಾಗಿ, ದೇಶಕ್ಕಾಗಿ ಸದಾ ಕಾಲ ದುಡಿಯುವುದೇ ಅವರ ನಿತ್ಯ ಜೀವನ. ದೀನ

ದಲಿತರ ಉದ್ಧಾರವೇ ಅವರ ಸದಾ ಚಿಂತೆ. ಹೋರಾಟದಲ್ಲಿಯೇ ಸದಾ ಕಾಲ ಕಳೆದವರು. ಅವರ ಸ್ವಂತಕ್ಕಾಗಿ, ಸ್ವಾರ್ಥಕ್ಕಾಗಿ ಸಾರ್ವಜನಿಕ ವೇದಿಕೆಯನ್ನು ಪದವಿಯನ್ನು ಬಳಸಿದವರಲ್ಲ. ಸರಳ ಮತ್ತು ಸ್ವಚ್ಛ ಜೀವಿ. ದುಡಿಮೆಯ ಫಲವಾಗಿ ಸ್ಥಾನಗಳನ್ನು ಅಲಂಕರಿಸಿ ಅದರಿಂದ ಸುಖ – ಸಂತೋಷವನ್ನು ಅನುಭವಿಸಿದವರಲ್ಲ. ಕೀರ್ತಿಶೇಷ ರಾಜಾಜಿಯವರ ದೃಷ್ಟಿಯಂತೆ ''ಅವರು ಸೇವೆಯಿಂದ ಫಲವನ್ನು ಅಪೇಕ್ಷಿಸಿ ಸೇವೆಗೆ ಕಳಂಕ ತಂದವರಲ್ಲ. ಸೇವೆಗೆ ಸೇವೆ ಉತ್ತಮ ಫಲ '' ಎಂದು ಅರಿತವರು ಗೌಡರು. ಉದಾತ್ತ ಮನೋಭಾವ ಅಸಾಧಾರಣ ಕುಶಲತೆ, ಧೀರ ಸಾಹಸ, ಅಪಾರ ತ್ಯಾಗ  ಅವರದು.ಅವರು ದೇಹವನ್ನು ದೇಶಕ್ಕಾಗಿ ಸವೆಸಿ ಅಮರತ್ವ ಹೊಂದಿದ್ದಾರೆ

ಹೀಗೆ ನಿತ್ಯ ಬದುಕಿನಲ್ಲಿ ಗೋಪಾಲಗೌಡರು ಸ್ವಾಭಿಮಾನಿಯಾಗಿ ಬದುಕಿದರು. ನಿಜವಾಗಿ ಕಷ್ಟ ಎಂದವರಿಗೆ ತಮ್ಮಲ್ಲಿರುವ ಅಲ್ಪಸ್ವಲ್ಪ ಹಣವನ್ನು ಎತ್ತಿಕೊಟ್ಟು ಬರಿಗೈಯಲ್ಲಿ ಬದುಕುತ್ತಿದ್ದರು. ಬದಹುತೇಕ ಸಂದರ್ಭದಲ್ಲಿ ತನಗೆ ಹಣಕಾಸಿನ ಅವಶ್ಯಕತೆ ಬಂದಾಗ ತಮ್ಮ ಆತ್ಮೀಯ ಗೆಳೆಯರ ಹತ್ತಿರ ನೇರವಾಗಿ ಹಣವನ್ನು ಕೇಳದೆ ತಮ್ಮ ಕಷ್ಟವನ್ನು ತೋಡಿಕೊಳ್ಳುತ್ತಿದ್ದರು. ಆಗ ಗೆಳೆಯರಿಗೆ ಅವರ ಪರಿಸ್ಥಿತಿ ಅರ್ಥವಾಗುತ್ತಿತ್ತು. ಮತ್ತು ಅವರ ಮೇಲಿನ ಅಭಿಮಾನದಿಂದ ತಮ್ಮ  ಹತ್ತಿರ ಹಣವಿಲ್ಲದಿದ್ದರೂ ಎಲ್ಲಿಂದಲಾದರೂ ತಂದಾದರೂ ಹಣವನ್ನು ಕೊಡುತ್ತಿದ್ದರು.

ಗೋಪಾಲಗೌಡರು ಭ್ರಷ್ಟಾಚಾರವನ್ನು ಎಂದೂ ಸಹಿಸುತ್ತಿರಲಿಲ್ಲ. ಯಾವುದೇ ಅಧಿಕಾರಿಗಳು ಅಥವಾ ರಾಜಕಾರಣಿಗಳು ಭ್ರಷ್ಟಾಚಾರಕ್ಕೆ ಒಳಗಾಗಿದ್ದು ಕಂಡುಬಂದರೆ ಅವರನ್ನು ಅಲ್ಲಿಯೇ ತರಾಟೆಗೆ ತೆಗೆದುಕೊಳ್ಳುವ ಕೆಲಸ ಮಾಡುತ್ತಿದ್ದರು. ಸಮಾಜವಾದದಲ್ಲಿ ಭ್ರಷ್ಟಾಚಾರಕ್ಕೆ ಅವಕಾಶವಿಲ್ಲ ಎಂಬುದು ಅವರ ನಿಲುವು. ಹರಿಜನ –ಗಿರಿಜನ ಅಥವಾ ಹಿಂದುಳಿದವರಿಗೆ ಕೊಟ್ಟ ಸೌಲಭ್ಯವನ್ನು ಹೆಚ್ಚಾಯಿತೆಂದು ಯಾರಾದರೂ ಗೋಗರೆದರೆ ಅಥವಾ ಅವಮಾನಕರವಾಗಿ ಮಾತನಾಡಿದರೆ  '' ನೀವು ಹೊಳೆ ದಾಟಿದ್ದೀರಿ !  ಅವರಿನ್ನು ಹೊಳೆಯ ಈಚೆ ದಡದಲ್ಲಿದ್ದಾರೆ. ಓಟದ ಸ್ಪರ್ಧೆ ಇಟ್ಟು ಗುರಿ ಮುಟ್ಟು ಅಂತ ಹೇಳಿದರೆ, ಯಾರು ಮೊದಲು ಗುರಿ ಮುಟ್ಟುತ್ತಾರೆ ಹೇಳಿ ಸ್ವಾಮಿ ! ಅವರು ನಿಮ್ಮ ಹಾಗೆ ಹೊಳೆ ದಾಟಲಿ ಆ ಮೇಲೆ ನೋಡುವಿರಂತೆ ''*

*ಗೋಪಾಲಗೌಡರ ನೆನಪಿನ ಸಂಪುಟ, ಸಂಪಾದಕರು –ಕಾಳೇಗೌಡ ನಾಗವಾರ ಮತ್ತು ಜಿ.ವಿ.ಆನಂದಮೂರ್ತಿ ಲೇಖನ–ಅನಿಕೇತನ,ಕಡಿದಾಳ್ ಶಾಮಣ್ಣ

ಎಂದು ಹೇಳುತ್ತಿದ್ದರು. ಅಂದರೆ ಇದು ಬಡವರ ಪರವಾದ ಮತ್ತು ಸಮಾಜವಾದಿ ತತ್ವದ ಬಗೆಗಿನ ಕಾಳಜಿಯನ್ನು ಸೂಚಿಸುತ್ತದೆ.

ಹೀಗೆ ಗೋಪಾಲಗೌಡರು ನಿರಂತರವಾಗಿ ತಮ್ಮ ಜೀವನದುದ್ದಕ್ಕೂ ಸಮಾಜವಾದಿ ತತ್ವಕ್ಕೆ ನಿಷ್ಠರಾಗಿ ಬದುಕಿದರು. ಈ ಕಾರಣದಿಂದಾಗಿಯೇ ಅವರು ಹಣಗಳಿಸುವ ಯಾವುದೇ ಉದ್ಯೋಗ ಅಥವಾ ವ್ಯವಹಾರವನ್ನು ಮಾಡದೆ ತಮ್ಮ ಕೊನೆಯ ದಿನಗಳವರೆಗೂ ಯಾವುದೇ ಸ್ವಂತ ಆಸ್ತಿ - ಸಂಪತ್ತನ್ನು ಮಾಡಲಿಲ್ಲ. ಅವರ ಹೆಸರಿನಲ್ಲಿದ್ದ ಆಸ್ತಿ ಎಂದರೆ ಶ್ರೀಮಾನ್ ವೀರೇಂದ್ರ ಪಾಟೀಲ್ ಮುಖ್ಯಮಂತ್ರಿಯಾಗಿದ್ದಾಗ ಸ್ವತಃ ಆಸಕ್ತಿಯಿಂದ ಮಂಜೂರು ಮಾಡಿಸಿಕೊಟ್ಟ ನಿವೇಶನ ಬಿಟ್ಟರೆ ಬೇರೇನೂ ಇರಲಿಲ್ಲ. ಹೀಗೆ ತಮ್ಮ ಇಡೀ ಬದುಕನ್ನು ಸಮಾಜವಾದಿ ತತ್ವಕ್ಕಾಗಿ, ಸಮಾಜದ ಪ್ರಗತಿಗಾಗಿ ಅರ್ಪಿಸಿಕೊಂಡರು.

ಅಧ್ಯಾಯ -6

# ಗೋಪಾಲಗೌಡರ ರಾಜಕೀಯ ಪ್ರೇರಣೆ ಮತ್ತು ಪ್ರವೇಶ

ಗೋಪಾಲಗೌಡರು ಒಬ್ಬ ಅಪ್ರತಿಮ, ವಿಶಿಷ್ಟ ರಾಜಕಾರಣಿ ಎಂಬುದು ಎಲ್ಲರಿಗೂ ತಿಳಿದಿರುವ ವಿಷಯ. ಇವರೊಬ್ಬ ಅಪರೂಪದ ವಿಶಿಷ್ಟ ವರ್ಚಸ್ವಿ ರಾಜಕಾರಣಿಯಾಗಲು ಪ್ರೇರಣೆಯಾದ ಅಂಶಗಳೇನು ಎಂಬುದನ್ನು ಶೋಧಿಸುತ್ತಾ ಹೋದರೆ, ನಮಗೆ ತಿಳಿಯುವ ಮುಖ್ಯ ವಿಷಯವೆಂದರೆ, ಅವರಲ್ಲಿ ರಾಜಕೀಯದ ಹೋರಾಟದ ಗುಣಗಳು ರಕ್ತಗತವಾಗಿದ್ದವು ಎಂಬುದು ತಿಳಿದುಬರುತ್ತವೆ. ಇವರೊಬ್ಬ ಮೂಲತಃ ಪಾಳೇಗಾರಿಕೆ ಮನೆತನದವರು ಎಂಬ ಪ್ರತೀತಿ ಇದೆ. ಇವರು ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲ್ಲೂಕು ಸಾಂತವೇರಿ ಗ್ರಾಮದ ಪಾಳೇಗಾರಿಕೆ ಮನೆತನದವರಾಗಿದ್ದು ಕೆಳದಿ ಅರಸರ ಕಾಲದಲ್ಲಿ ಆರಗಕ್ಕೆ ಸೈನಿಕರಾಗಿ ಇವರ ಪೂರ್ವಿಕರು ಬಂದು ನೆಲೆಸಿದರು. ಆದ್ದರಿಂದ ಇವರು ಮೂಲತಃ ದೇಶ ರಕ್ಷಣೆಯಲ್ಲಿ ತೊಡಗಿದ ಕುಟುಂಬದವರು ಎಂಬುದಕ್ಕೆ ಪುರಾವೆಗಳಿವೆ. ಅಂತೆಯೇ ಇವರ ತಾಯಿ ಸಹ ಕವಲೇದುರ್ಗದ ನಾಯಕರ ಮನೆತನದವರು ಎಂಬುದಕ್ಕೆ ಪುರಾವೆಗಳಿವೆ. ಇವರ ತಾಯಿಯ ಪೂರ್ವಿಕರು ಶಿವಪ್ಪ ನಾಯಕನ ಆಳ್ವಿಕೆ ಕಾಲದಲ್ಲಿ ಕವಲೇದುರ್ಗದಲ್ಲಿ ಸೈನ್ಯದ ದಂಡನಾಯಕರಾಗಿ ಕಾರ್ಯ ನಿರ್ವಹಿಸಿದ್ದರು ಎಂಬುದಕ್ಕೆ ಪುರಾವೆಗಳಿವೆ. ಒಟ್ಟಿನಲ್ಲಿ ಇವರು ತಾಯಿ ಮತ್ತು ತಂದೆ ಎರಡೂ ಕಡೆಯಿಂದಲೂ ವೀರವಂಶವಾಹಿನಿಗೆ ಸೇರಿದವರು ಎಂಬುದು ತಿಳಿದುಬರುತ್ತದೆ. ಹೀಗಾಗಿಯೇ ರಕ್ತಗತವಾಗಿ ಹೋರಾಟದ ಮತ್ತು ಆಡಳಿತದ ಗುಣಗಳು ಗೋಪಾಲಗೌಡರಲ್ಲಿದ್ದುದರಿಂದ ಅವರೊಬ್ಬ ಮಹಾನ್ ರಾಜಕಾರಣಿಯಾಗಲು ಪ್ರೇರಣೆ ಆಗಿರಬಹುದು ಎಂದು ಅಭಿಪ್ರಾಯ ಪಡಲಾಗಿದೆ. ಇದಕ್ಕೆ ಪೂರಕವಾಗಿ ಅವರು ಹೊಂದಿದ್ದ ಮುಂಗೋಪ ಮತ್ತು ತೀಕ್ಷ್ಣವಾಗಿ ಪ್ರತಿಕ್ರಿಯಿಸುವ ಗುಣಗಳು ಅವರ ಪಾಳೇಗಾರಿಕೆ ವ್ಯಕ್ತಿತ್ವವನ್ನು ಬಹಳಷ್ಟು ಸಾರಿ ಸಾಬೀತು ಪಡಿಸಿರುವುದನ್ನು ಗಮನಿಸಬಹುದು.

ಗೋಪಾಲಗೌಡರು ರಾಜಕೀಯ ಹೋರಾಟಕ್ಕಿಳಿಯಲು ಪ್ರೇರಕವಾದ ಅತಿ ಮುಖ್ಯ ಅಂಶವೆಂದರೆ, ಇವರ ಬಾಲ್ಯ ಮತ್ತು ವಿದ್ಯಾಭ್ಯಾಸದ ಸಂದರ್ಭದಲ್ಲಿನ ಭಾರತದ ರಾಜಕೀಯ ಪರಿಸ್ಥಿತಿ. ಇವರು ಜನಿಸಿದ ಸಂದರ್ಭದಲ್ಲಿ ಭಾರತದ ಎಲ್ಲಾ ವಿಚಾರವಂತ ಯುವ ಜನತೆ

ಬಹುತೇಕವಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡ ಸಂದರ್ಭ. ಬ್ರಿಟೀಷರ ಸಾಮ್ರಾಜ್ಯಶಾಹಿ ಮತ್ತು ವಸಾಹತುಶಾಹಿ ಆಡಳಿತದ ವಿರುದ್ಧ ರಣಕಹಳೆ ಮೊಳಗಿಸಿದ ಕಾಲವದು. ಗಾಂಧೀಜಿ ನೇತೃತ್ವದಲ್ಲಿ ಸರ್ದಾರ್ ವಲ್ಲಭಬಾಯಿ ಪಟೇಲ್, ಮೌಲಾನಾ ಅಬ್ದುಲ್ ಕಲಾಂ ಆಜಾದ್, ಮಹಮ್ಮದಾಲಿ ಜಿನ್ನಾ , ನೆಹರು ಹಲವಾರು ಜನ ಮುಖಂಡರು ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದರು. ದೇಶದಾದ್ಯಂತ ಹೋರಾಟ ತೀವ್ರವಾಗಿತ್ತು. ಈ ಸ್ವಾತಂತ್ರ್ಯ ಹೋರಾಟದ ಹಲವು ವಿಶಿಷ್ಟ ಘಟನೆಗಳು ಗೋಪಾಲಗೌಡರ ಬಾಲ್ಯ ಜೀವನದ ಮೇಲೆ ಪ್ರಭಾವ ಬೀರಿದ್ದವು. ಈ ಪ್ರಬಾವದ ಜೊತೆಗೆ ಕಮಕೋಡು ನರಸಿಂಹ ಶಾಸ್ತ್ರಿಯವರಂತಹ ದೇಶಪ್ರೇಮಿ ಉಪಾಧ್ಯಾಯರ ಪ್ರೋತ್ಸಾಹ ಮತ್ತು ಮಾರ್ಗದರ್ಶನ ಇವರನ್ನು ರಾಜಕೀಯ ಹೋರಾಟಗಾರ ರನ್ನಾಗಿ ರೂಪಿಸಿತು. ಆದ್ದರಿಂದಲೇ ತಾನು ಪ್ರೌಢಶಾಲಾ ವಿದ್ಯಾರ್ಥಿಯಾಗಿದ್ದಾಗಲೇ 1942 ರ 'ಭಾರತ ಬಿಟ್ಟು ತೊಲಗಿ ' ಚಳುವಳಿಯಲ್ಲಿ ವಿದ್ಯಾರ್ಥಿ ನಾಯಕರಾಗಿ ಭಾಗವಹಿಸಿ ತೀವ್ರ ಹೋರಾಟವನ್ನು ನಡೆಸಿ ಜೈಲು ಶಿಕ್ಷೆಯನ್ನು ಅನುಭವಿಸಿದ್ದರು. ಆ ನಂತರದ ದಿನಗಳಲ್ಲಿಯೂ ವಿವಿಧ ಭೂಗತ ಚಟುವಟಿಕೆಗಳನ್ನು ನಡೆಸಿ ಬ್ರಿಟೀಷರ ಆಡಳಿತಕ್ಕೆ ಅಡ್ಡಿಪಡಿಸುವ ಅನೇಕ ಕಾರ್ಯಗಳನ್ನು ನಿರ್ವಹಿಸಿದ್ದರು. ಇವರು ಬಸವಾನಿ ರಾಮಶರ್ಮ, ಶ್ಯಾಮ ಐತಾಳ್, ಡಾ॥ಅನಂತರಾಮ ಭಟ್ಟರು, ದೇವಂಗಿ ಚಂದ್ರಶೇಖರ್, ವೆಂಕಟರಾಯ ಕಾಮತ್ ಮುಂತಾದ ಸ್ಥಳೀಯ ಯುವಕರನ್ನು ಒಗ್ಗೂಡಿಸಿ ಟೆಲಿಗ್ರಾಫ್ ತಂತಿಯನ್ನು ಕತ್ತರಿಸಿ ಬ್ರಿಟೀಷ್ ಆಡಳಿತಕ್ಕೆ ಅಡ್ಡಿಪಡಿಸಿದ ಘಟನೆಯನ್ನು ಇಲ್ಲಿ ಉದಾಹರಿಸಬಹುದು. ಇಂತಹ ಹಲವಾರು ಚಟುವಟಿಕೆಗಳನ್ನು ಭೂಗತವಾಗಿ ನಿರ್ವಹಿಸಿದರಲ್ಲದೆ, ಬಹಳಷ್ಟು ಯುವಕರನ್ನು ಸಂಘಟಿಸಿ ಹೋರಾಟಕ್ಕೆ ಅಣಿಗೊಳಿಸಿದರು.

ಗೋಪಾಲಗೌಡರು ಶಿವಮೊಗ್ಗದ ಇಂಟರ್ ಮೀಡಿಯಟ್ ಕಾಲೇಜಿನಲ್ಲಿ ಓದುತ್ತಿರುವಾಗ ಶಿವಮೊಗ್ಗ ಪಟ್ಟಣದ ರಾಜಕೀಯ ಪರಿಸರ ಇವರ ಮೇಲೆ ಬಹಳಷ್ಟು ಪ್ರಭಾವ ಬೀರಿತು. ಈಗಾಗಲೇ ಆಳವಾದ ಅಧ್ಯಯನದ ಮೂಲಕ ಪ್ರಬುದ್ಧ ರಾಜಕೀಯ ಪ್ರಜ್ಞೆಯನ್ನು ಬೆಳೆಸಿಕೊಂಡಿದ್ದರು. ಇದಕ್ಕೆ ಪೂರಕವಾದ ವಾತಾವರಣವನ್ನು ಶಿವಮೊಗ್ಗದ ಪರಿಸರ ಒದಗಿಸಿತು. ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದಂತೆ ಹಲವು ಭಾಷಣಗಳನ್ನು ಮಾಡುವ ಮೂಲಕ ತಮ್ಮ

ವಾಗ್ಮೀಯತೆಯಿಂದ ಜನರನ್ನು ಆಕರ್ಷಿಸಿ ಒಂದು ತರುಣರ ದಂಡನ್ನೇ ಕಟ್ಟಿಕೊಂಡು ಯಾವುದೇ ಕಷ್ಟನಿಷ್ಠೂರಗಳಿಗೆ ಅಂಜದೆ ಹೋರಾಡಿದರು. ಬಹಳಷ್ಟು ಸಂದರ್ಭದಲ್ಲಿ ಮಾರುವೇಶದಲ್ಲಿ ಬಂದು ಭಾಷಣ ಮಾಡಿದ, ಜನರನ್ನು ಸಂಘಟಿಸಿದ ಉದಾಹರಣೆಗಳವೆ. 1947 ರ ಸ್ವಾತಂತ್ರ್ಯ ಚಳುವಳಿ ಶಿವಮೊಗ್ಗ ಜಿಲ್ಲೆಯಾದ್ಯಂತ ಉಗ್ರವಾಗಿ ಮತ್ತು ವ್ಯಾಪಕವಾಗಿ ನಡೆಯಿತು. ಈ ಚಳುವಳಿಯಲ್ಲಿ ಮುಂಚೂಣಿಯಲ್ಲಿದ್ದು ಅಗ್ರ ಪಾತ್ರವನ್ನು ವಹಿಸುವುದರ ಮೂಲಕ ಅದರ ಯಶಸ್ಸಿಗೆ ಕಾರಣರಾದರು. 1946 ರಲ್ಲಿ ನಂಜನಗೂಡಿನಲ್ಲಿ ನಡೆದ ವಿದ್ಯಾರ್ಥಿ ಕಾಂಗ್ರೆಸ್ ಸಮಾವೇಶದಲ್ಲಿ ವಿದ್ಯಾರ್ಥಿ ನಾಯಕರಾಗಿ ಭಾಗವಹಿಸಿ ತಮ್ಮ ಕ್ರಿಯಾಶೀಲತೆ ಮತ್ತು ಸ್ವಚ್ಛ ಸರಳ ಭಾಷೆಯಿಂದ ಕೂಡಿದ ವಿಶಿಷ್ಟ ಭಾಷಣದ ಮೂಲಕ ಸಮಾವೇಶದ ಗಮನ ಸೆಳೆದರು. ಇದು ಅವರ ನಾಯಕತ್ವಕ್ಕೆ ಬುನಾದಿಯಾಯಿತು. 1948 ರಲ್ಲಿ ನಾಸಿಕ್‌ನಲ್ಲಿ ನಡೆದ ಸಮಾಜವಾದಿ ಅಧಿವೇಶನದಲ್ಲಿ ಪಾಲ್ಗೊಂಡು ಕಾಂಗ್ರೆಸ್‌ನಿಂದ ಪ್ರತ್ಯೇಕವಾದ ಸಮಾಜವಾದಿ ಪಕ್ಷ ಕಟ್ಟಲು ಪ್ರೋತ್ಸಾಹಿಸಿದರಲ್ಲದೆ ಅದರ ಅಗತ್ಯತೆಯನ್ನು ಕುರಿತು ಅಧಿವೇಶನದ ಗಮನ ಸೆಳೆದರು. ಅಂತಿಮವಾಗಿ ಸಮಾಜವಾದಿ ಪಕ್ಷದ ಸ್ಥಾಪನೆ ಗೋಪಾಲಗೌಡರ ರಾಜಕೀಯ ನಾಯಕತ್ವಕ್ಕೆ ಅಧಿಕೃತ ವೇದಿಕೆಯಾಯಿತು. ಈ ವೇದಿಕೆಯನ್ನು ಬಳಸಿಕೊಂಡು ಕರ್ನಾಟಕದಾದ್ಯಂತ ಸಮಾಜವಾದಿ ರಾಜಕೀಯವನ್ನು ಮತ್ತು ಸಮಾಜವಾದಿ ನಾಯಕರನ್ನು ಬೆಳೆಸುವ ಪ್ರಯತ್ನ ಮಾಡುವುದರ ಮೂಲಕ ಕರ್ನಾಟಕ ರಾಜ್ಯದ ಸಮಾಜವಾದಿ ರಾಜಕೀಯ ನಾಯಕರಾಗಿ ಹೊರಹೊಮ್ಮಿದರು.

1951 ರಲ್ಲಿ ನಡೆದ 'ಕಾಗೋಡು ಸತ್ಯಾಗ್ರಹ ' ಸ್ವಾತಂತ್ರ್ಯ ಭಾರತದ ಒಂದು ಐತಿಹಾಸಿಕ ಘಟನೆಯಾಗಿದ್ದು, ಗೋಪಾಲಗೌಡರ ರಾಜಕೀಯ ಪ್ರವೇಶದ ಮಹತ್ತರ ಘಟ್ಟವೂ ಆಗಿದೆ. ಅವರೆ ಹೇಳಿರುವಂತೆ ಈ ಹೋರಾಟ ಅವರ ಜೀವನದಲ್ಲಿ ಮರೆಯಲಾರದ ವಿಶಿಷ್ಟ ಘಟನೆ.

"ಕಾಗೋಡು ! ನೆನೆನೆದೊಡನೆ ನಾನು ಅಲ್ಲಿ, ಆ ಪರಿಸರದಲ್ಲಿ, ಆ ಕಾಲದಲ್ಲಿ, ಹಿಂದಕ್ಕೆ ಮತ್ತೆ ಹೋಗಿ ಬದುಕುವುದು ಅಸಾಧ್ಯ. ನನ್ನ ಪ್ರಜ್ಞೆಯಲ್ಲಿ ಜಾಗೃತವಾಗಿರುವ ಒಂದು ಮಹಾ ಘಟನೆ 'ಕಾಗೋಡು ಹೋರಾಟ '. ನಾನು ಈಗ ಹೀಗೆ ಆಗಿದ್ದರೆ, ಹಾಗೆ ಆಗುವಲ್ಲಿ ಕಾಗೋಡಿನ ಕೈವಾಡ ಬಹಳವಿದೆ. ನನ್ನ ಮನಸ್ಸಿನ ಮೇಲೆ ಅಚ್ಚಳಿಯದೆ ಉಳಿದಿರುವ, ದಿನ ಕಳೆದಂತೆ ಹೆಚ್ಚು

ಹೆಚ್ಚು ಹಸಿರಾಗಿ ನಳನಳಿಸುವ ಒಂದು ಪ್ರಸಂಗ ಕಾಗೋಡು. ಅದು ಒಂದು ಆಳವಾದ ಅನುಭವ. ಅಂತೆಯೇ ಅದು ನನ್ನ ಸ್ಮರಣೆಯಲ್ಲಿ ಚಿರ "*

ಅಂದರೆ ಇಂತಹ ಘಟನೆ ಇವರನ್ನು ಮಲೆನಾಡಿನ ಭಾಗದ ಪ್ರಶ್ನಾತೀತ ರಾಜಕೀಯ ನಾಯಕರನ್ನಾಗಿ ರೂಪಿಸಿತು. ಅಲ್ಲದೆ ಇವರ ಹೆಸರು ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ಪ್ರಚಲಿತವಾಗಲು ಸಹಕಾರಿಯಾಯಿತು. ಜೊತೆಗೆ ಸ್ಥಳೀಯ ಸ್ನೇಹಿತರು, ಸಮಾಜವಾದಿ ಚಿಂತನೆ ಮತ್ತು ಹೋರಾಟಗಳಿಗೆ ಸ್ಪಂದಿಸುವವರು, ಸದಾ ಬೆನ್ನ ಹಿಂದೆ ನೆರಳಿನಂತೆ ಇದ್ದು, ಪ್ರೋತ್ಸಾಹಿಸಿ ಸಹಕರಿಸಿದ ಜಿ.ಸದಾಶಿವ ರಾಯರು, ಅಣ್ಣಜಿ, ವೈ.ಆರ್. ಪರಮೇಶ್ವರ, ಶಾಮ ಐತಾಳ್, ಗುರುಮೂರ್ತಿ, ಬಸವಾನಿ ರಾಮಶರ್ಮ, ಟಿ.ವಿಶ್ವನಾಥರಾವ್ ಇಂತಹ ಹಲವಾರು ಮುಖಂಡರುಗಳು ಇವರ ರಾಜಕೀಯ ಪ್ರವೇಶ ಮತ್ತು ಹೋರಾಟಗಳಿಗೆ ಸದಾ ಪ್ರೇರಕ ಶಕ್ತಿಗಳಾಗಿದ್ದರು ಎನ್ನಬಹುದು.

ಇವರು ರಾಜಕೀಯದಲ್ಲಿ ಆಸಕ್ತಿ ವಹಿಸಲು ಮತ್ತು ರಾಜಕೀಯ ಹೋರಾಟ ಮಾಡಲು ಪ್ರೇರಕವಾದ ಬಹುಮುಖ್ಯ ಅಂಶವೆಂದರೆ, ಇವರ ಆಳವಾದ ಅಭ್ಯಾಸ. ತಾವು ವಿದ್ಯಾರ್ಥಿಯಾಗಿರುವಾಗಲೇ ಪಠ್ಯ ವಿಷಯಗಳಿಗಿಂತ ಪಠ್ಯೇತರ ವಿಷಯಗಳನ್ನು ಆಳವಾಗಿ ಓದುತ್ತಿದ್ದರು. ಇಂತಹ ಆಳವಾದ ಅಭ್ಯಾಸದಿಂದಾಗಿ ಸೈದ್ಧಾಂತಿಕ, ತಾತ್ವಿಕ ವಿಚಾರಗಳನ್ನು ಅರಿಯಲು ಸಾಧ್ಯವಾಯಿತು. ಮತ್ತು ಆ ಮೂಲಕ ರಾಜಕೀಯ ಹೋರಾಟದ ಸ್ವರೂಪ ವಿಧಿ-ವಿಧಾನಗಳನ್ನು ರೂಪಿಸಿಕೊಳ್ಳಲು ಸಾಧ್ಯವಾಯಿತು. ಅಲ್ಲದೆ ಕಾಲೇಜು ಶಿಕ್ಷಣದ ಸಂದರ್ಭದಲ್ಲಿ ಅನೇಕ ರಾಜಕೀಯ ಸಿದ್ಧಾಂತಗಳನ್ನು ಓದಿ ವಿಶ್ಲೇಷಿಸುತ್ತಿದ್ದರು. ಇವರ ಅನೇಕ ಕೃತಿಗಳ ಸಿದ್ಧಾಂತಗಳ ವಿಶ್ಲೇಷಣೆ ಉಪನ್ಯಾಸಕರನ್ನು ಚಕಿತಗೊಳಿಸುತ್ತಿತ್ತು. ಇವರು ಇಂತಹ ಆಳವಾದ ಅಭ್ಯಾಸದ ಮೂಲಕ ವಿಶಿಷ್ಟ ರಾಜಕೀಯ ಜ್ಞಾನವನ್ನು ಸಂಪಾದಿಸಿದ್ದರು.

1952 ಗೋಪಾಲಗೌಡರ ರಾಜಕೀಯ ಜೀವನದ ವಿಶಿಷ್ಟ ಮಹತ್ವದ ಘಟ್ಟ, ದೇಶದ

---

*ಜೀವಂತ ಜ್ವಾಲೆ - ಕೋಣಂದೂರು ವೆಂಕಪ್ಪ, ಲೇಖನ - ಕಾಗೋಡು ಚಲೋ - ಗೋಪಾಲಗೌಡ.

ಮೊದಲ ಮಹಾ ಚುನಾವಣೆ. ಗೋಪಾಲಗೌಡರು ಈಗಾಗಲೇ ವಿಭಿನ್ನ ಹೋರಾಟ, ಚಳುವಳಿ, ಸತ್ಯಾಗ್ರಹಗಳಲ್ಲಿ ಭಾಗವಹಿಸಿ ಅವುಗಳ ಯಶಸ್ಸಿಗೆ ಕಾರಣರಾಗಿದ್ದರು ಮತ್ತು ಸಮಾಜವಾದಿ ಹೋರಾಟದ ನಾಯಕರು, ಸಮಾಜವಾದಿ ಪಕ್ಷದ ನಾಯಕರು ಆಗಿದ್ದರು. ಶಿವಮೊಗ್ಗ ಜಿಲ್ಲೆಯಾದ್ಯಂತ ಸಾಮಾನ್ಯ ಜನತೆಯ, ಯುವಕರ ಮನಗೆದ್ದ ಜನನಾಯಕರಾಗಿದ್ದರು. ಆದರೆ ಕೈಯಲ್ಲಿ ಬಿಡಿಗಾಸೂ ಇಲ್ಲದೆ ಅಪ್ಪಟ ಸಮಾಜವಾದಿ ಜನ ಸೇವಕರಾಗಿದ್ದರು. ಇವರು ಮೊದಲ ಮಹಾ ಚುನಾವಣೆಯಲ್ಲಿ ಸಮಾಜವಾದಿ ಪಕ್ಷದ ಅಭ್ಯರ್ಥಿಯಾಗಿ ಸಾಗರ -ಹೊಸನಗರ - ತೀರ್ಥಹಳ್ಳಿ ವಿಧಾನಸಭಾ ಕ್ಷೇತ್ರದಿಂದ ಸ್ಪರ್ಧಿಸಿದ್ದರು. ಇವರ ಪ್ರಬಲ ಸ್ಪರ್ಧಿ ಕಾಂಗ್ರೆಸ್‌ನ ಶ್ರೀ ಬದರಿ ನಾರಾಯಣ್ ಅಯ್ಯಂಗಾರ್. ಇವರು ಅತ್ಯಂತ ಶ್ರೀಮಂತ ಜಮೀನ್ದಾರರು. ಕಾಂಗ್ರೆಸ್‌ನ ನಾಯಕರೂ, ಜಮೀನ್ದಾರರ ಬೆಂಬಲವುಳ್ಳವರೂ ಆಗಿದ್ದರು. ಈಗಾಗಲೇ ಕಾಗೋಡು ಸತ್ಯಾಗ್ರಹದ ಮೂಲಕ ಜಮೀನ್ದಾರರ ಆಕ್ರೋಶಕ್ಕೆ ಒಳಗಾಗಿದ್ದ ಗೋಪಾಲಗೌಡರು ಚುನಾವಣಾ ಸಂದರ್ಭದಲ್ಲಿ ಬಿಡಿಗಾಸಿಲ್ಲದ್ದರಿಂದ ಜಮೀನ್ದಾರರ ಅಪಹಾಸ್ಯಕ್ಕೂ ಒಳಗಾಗಿದ್ದರು. ಆದರೆ ಠೇವಣಿ ಹಣವನ್ನು ತಮ್ಮ ಬೆಂಬಲಿಗರ ಸಹಕಾರದಿಂದ ಕಟ್ಟಿದ ಗೋಪಾಲಗೌಡರು ಅತ್ಯಂತ ಸರಳವಾಗಿ ಅಬ್ಬರದ ಪ್ರಚಾರವಿಲ್ಲದೆ ಮಿತ ವೆಚ್ಚದಲ್ಲಿ ಚುನಾವಣೆಯನ್ನು ಮುಗಿಸಿದರು. ಗೋಪಾಲಗೌಡರು ಗೇಣಿ ರೈತರ, ಕೂಲಿ ಕಾರ್ಮಿಕ, ಬಡವರ, ಯುವಕರ ಬೆಂಬಲದಿಂದ ಪ್ರಚಂಡ ಬಹುಮತದಿಂದ ಪ್ರಜಾಪ್ರತಿನಿಧಿಯಾಗಿ ಆರಿಸಿ ಬಂದರು.

ಗೋಪಾಲಗೌಡರು ಶಾಸಕರಾಗಿರುವುದು ಅವರ ರಾಜಕೀಯ ಸಾಧನೆಗೆ ಸೂಕ್ತ ಅವಕಾಶವಾಯಿತು. ಇವರು ಈ ಅವಕಾಶವನ್ನು ಸಂಪೂರ್ಣವಾಗಿ ಬಳಸಿಕೊಂಡು ಸದನದ ಒಳಗೆ ಮತ್ತು ಹೊರಗೆ ವಿಶಿಷ್ಟ ಕಾರ್ಯಗಳಲ್ಲಿ ತೊಡಗಿದರು. ಇವರು ಶಾಸನ ಸಭೆಯಲ್ಲಿ ಮಾಡುತ್ತಿದ್ದ ಭಾಷಣಗಳು, ಚರ್ಚೆಗಳು ಇಡೀ ಸದನದ ಗಮನ ಸೆಳೆಯುತ್ತಿದ್ದವಲ್ಲದೆ, ಸರ್ಕಾರಕ್ಕೆ ದಿಗ್ಬಂಧನವಾಗಿ ಪರಿಣಮಿಸುತ್ತಿದ್ದವು. ಅವರ ಪ್ರತಿಯೊಂದು ಮಾತುಗಳು ಸ್ಪಷ್ಟವಾದ ತಾತ್ವಿಕ ಹಿನ್ನೆಲೆಯನ್ನು ಹೊಂದಿದ್ದು , ಅವು ಸಮಾಜದ ಆಮೂಲಾಗ್ರ ಬದಲಾವಣೆಗೆ ಪೂರಕವಾಗಿದ್ದವು. ಕೇವಲ ಐದು ವರ್ಷಗಳಲ್ಲಿಯೇ ತಮ್ಮ ಶುದ್ಧ ಭಾಷೆಯ ಸರಳ ವಿಶಿಷ್ಟ ವಾಕ್‌ಚಾತುರ್ಯದಿಂದ ಸದನದ ಗಮನ ಸೆಳೆಯುವುದರ ಜೊತೆಗೆ ಇಡಿ ಕರ್ನಾಟಕದ ಜನಮನದಲ್ಲಿ ಹಾಸುಹೊಕ್ಕು

ಜನನಾಯಕರಾದರು. ಸಮಾಜವಾದಿ ಪಕ್ಷದ ಏಕೈಕ ಪ್ರತಿನಿಧಿಯಾಗಿದ್ದರೂ ಸಮಾಜವಾದಿ ತತ್ವವನ್ನಾಧರಿಸಿದ ಹಲವಾರು ಯೋಜನೆಗಳನ್ನು, ಕಾರ್ಯಕ್ರಮಗಳನ್ನು ರೂಪಿಸುವಂತೆ ಸರ್ಕಾರದಲ್ಲಿ ಒತ್ತಡ ತರುವುದರ ಮೂಲಕ ವಿಶೇಷವಾಗಿ ಬಡವರ, ದಲಿತರ ಪರವಾದ ಕಾರ್ಯಕ್ರಮಗಳನ್ನು ರೂಪಿಸಲು ಪ್ರಯತ್ನಿಸಿದರು.

1957 ರ ಎರಡನೇ ಮಹಾ ಚುನಾವಣೆಯಲ್ಲಿ ಪುನಃ ಅದೇ ಸಾಗರ -ಹೊಸನಗರ - ತೀರ್ಥಹಳ್ಳಿ ವಿಧಾನಸಬಾ ಕ್ಷೇತ್ರದಿಂದ ಸಮಾಜವಾದಿ ಪಕ್ಷದ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದರು. ಇವರ ಪ್ರತಿಸ್ಪರ್ಧಿ ಶ್ರೀ ಬದರೀನಾರಾಯಣ್ ಅಯ್ಯಂಗಾರ್. ಆದರೆ ಈ ಚುನಾವಣೆ ಗೋಪಾಲಗೌಡರ ಪರ ಒಲಿಯಲಿಲ್ಲ. ಕಾಂಗ್ರೆಸ್ ಪಕ್ಷದ ನಾಯಕರು ಮಾಡಬಾರದ ವಿದ್ಯೆಗಳೆಲ್ಲವನ್ನು ಪ್ರಯೋಗಿಸಿ ಗೌಡರ ಜನಪ್ರಿಯತೆ, ಪ್ರಾಮಾಣಿಕತೆಯನ್ನು ಬಿರುಕುಗೊಳಿಸುವ ರಣ ತಂತ್ರಗಳನ್ನು ರೂಪಿಸಿ ಜನತೆಯನ್ನು ಮೋಸಗೊಳಿಸಿ ಗೋಪಾಲಗೌಡರನ್ನು ಪರಾಭವಗೊಳಿಸಿ ದರು. ಆದರೆ ನಂತರದ ದಿನಗಳಲ್ಲಿ ಇವರ ವಿರುದ್ಧ ಕೆಲಸ ಮಾಡಿದ ಅನೇಕ ಮಹನೀಯರು ತಮ್ಮ ತಪ್ಪನ್ನು ಅರಿತು ಪಶ್ಚಾತ್ತಾಪಪಟ್ಟಿರುವುದನ್ನು ಗಮನಿಸಬಹುದು. ಆದರೆ ಗೋಪಾಲಗೌಡರಿಗೆ ಸೋಲು -ಗೆಲುವು ಎರಡೂ ಒಂದೆ ಆಗಿದ್ದವು. ಏಕೆಂದರೆ ಅವರು ಇಡೀ ಜೀವನದುದ್ದಕ್ಕೂ ಸೋತು -ಗೆದ್ದು ಬಂದವರಾಗಿದ್ದರು. ಇವರು ಚುನಾವಣೆಯಲ್ಲಿ ಸೋತರೂ ಅಧಿಕಾರವಿಲ್ಲವೆಂದು ಹಣವಿಲ್ಲವೆಂದು ಸುಮ್ಮನಾಗದೆ "ಗೆದ್ದರೆ ನಾನು ಕ್ಷೇತ್ರದ ಪ್ರತಿನಿಧಿ, ಸೋತರೆ ನಾಡಿನ ಪ್ರತಿನಿಧಿ" ಎಂದು ಇಡೀ ನಾಡಿನಾದ್ಯಂತ ಸಂಚರಿಸುವ ಕಷ್ಟದಲ್ಲಿರುವವರಿಗೆ, ಸಮಸ್ಯೆಗೊಳಗಾದವರಿಗೆ ಸಹಕರಿಸುವ ಅವರ ಪರವಾಗಿ ಹೋರಾಡುವ ಕಾರ್ಯದಲ್ಲಿ ನಿರತರಾದವರು ಎಂತಹ ದುಃಸ್ಥಿತಿಯಲ್ಲಿಯೂ ಇವರು ಜನಹಿತವನ್ನು ಕಡೆಗಣಿಸಲಿಲ್ಲ.

1957 -1962 ರ ಐದು ವರ್ಷದ ಕಾಲವೇ ಗೋಪಾಲಗೌಡರ ಮಹತ್ತರ ಮತ್ತು ಸಂದಿಗ್ಧ ಕಾಲವಾಗಿತ್ತು. ಏಕೆಂದರೆ ಇವರು

1. ಆರ್ಥಿಕವಾಗಿ ಬಲಹೀನರಾಗಿದ್ದರು.
2. ಐದು ವರ್ಷದ ತಮ್ಮ ಶಾಸನ ಸಭೆಯ ನಡುವಳಿಕೆ ಮತ್ತು ಕಾಗೋಡು

ಸತ್ಯಾಗ್ರಹದಿಂದ ಜಮೀನ್ದಾರ ಶ್ರೀಮಂತ ಸಮುದಾಯದವರ ವಿರೋಧಿ ಪಡೆಯನ್ನು ಕಟ್ಟಿಕೊಂಡಿದ್ದರು.

3. ಸಮಾಜವಾದಿ ಪಕ್ಷವು ಭದ್ರ ನೆಲೆ ಕಂಡುಕೊಳ್ಳಲು ಇನ್ನೂ ಸಾಧ್ಯವಾಗಿರಲಿಲ್ಲ ಮತ್ತು ಸಂಪನ್ಮೂಲದ ಕೊರತೆಯನ್ನು ಮತ್ತು ಗೌಡರಿಗೆ ಸರಿಸಮಾನರಾದ ನಾಯಕರ ಕೊರತೆಯನ್ನು ಎದುರಿಸುತ್ತಿತ್ತು.

4. ಗಾಂಧೀಜಿ ಮತ್ತು ಸಮಾಜವಾದಿಗಳು ಸ್ವಾತಂತ್ರ್ಯಾನಂತರ ಕಾಂಗ್ರೆಸ್ ಪಕ್ಷವನ್ನು ಏನು ವಿಸರ್ಜಿಸಬೇಕೆಂದುಕೊಂಡಿದ್ದರೋ ಅದಕ್ಕೆ ವಿರುದ್ಧವಾಗಿ ಕಾಂಗ್ರೆಸ್ ಎರಡು ಬಾರಿ ಅಧಿಕಾರ ಹಿಡಿದು ಬಲಗೊಳ್ಳುತ್ತಿತ್ತು.

ಹೀಗೆ ಇಂತಹ ಅನೇಕ ವಿರೋಧ ಮತ್ತು ಸಮಸ್ಯೆಗಳನ್ನು ಎದುರಿಸಬೇಕಾದ ಪರಿಸ್ಥಿತಿ ಎದುರಾಯಿತು. ಆದರೆ ಇದಾವುದಕ್ಕೂ ಜಗ್ಗದೆ ಇವರು ಇಡೀ ನಾಡಿನಾದ್ಯಂತ ಸಂಚರಿಸಿ ಪಕ್ಷವನ್ನು ಸಂಘಟಿಸುವ, ನಾಯಕರನ್ನು ಬೆಳೆಸುವ ಕಾರ್ಯಗಳನ್ನು ಮಾಡುತ್ತಾ ರೈತರ ಕೂಲಿಯಾಳುಗಳ ಹೋರಾಟಗಳನ್ನು ಸಂಘಟಿಸಿದರು. ವಿದ್ಯುತ್ ಇಲಾಖೆಯ ಗ್ಯಾಂಗ್ ಕೂಲಿಗಳ, ಲೈನ್‌ಮನ್‌ಗಳ ಸಂಘಟನೆಗೆ ಪಕ್ಷ ವ್ಯವಸ್ಥಿತ ಹೋರಾಟ ನಡೆಸಿ ಅವರ ಸೇವೆ ಖಾಯಂ ಆಗಲು ಪ್ರಯತ್ನಿಸಿದರು. ಹೀಗೆ ಈ ಅವಧಿಯಲ್ಲಿ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಪಕ್ಷದ ಬಲವರ್ಧನೆಗೆ ಪ್ರಯತ್ನಿಸಿದರು. ಈ ರೀತಿಯ ನಿರಂತರ ಪ್ರಯತ್ನಗಳು ಮುಂದಿನ ಚುನಾವಣೆಯಲ್ಲಿ ಸಮಾಜವಾದಿ ಪಕ್ಷ ಭದ್ರ ನೆಲೆಕಂಡುಕೊಳ್ಳಲು ಸಾಧ್ಯವಾಯಿತು. ಹೀಗೆ ಈ ಐದು ವರ್ಷದ ಅವಧಿಯಲ್ಲಿ ನಾಡಿನಾದ್ಯಂತ ಪಕ್ಷವನ್ನು ಕಟ್ಟಿ ಸಮಾಜವಾದಕ್ಕೆ ರಾಜ್ಯದಲ್ಲಿ ಒಂದು ಭದ್ರವಾದ ಅಡಿಪಾಯವನ್ನು ನಿರ್ಮಿಸುವ ಪ್ರಯತ್ನ ಮಾಡಿದರು.

1962ರ ಚುನಾವಣೆಯಲ್ಲಿ ಕ್ಷೇತ್ರಗಳ ಪುನರ್ ವಿಂಗಡಣೆ ಆಗಿತ್ತು. ಅಂತೆಯೇ ತೀರ್ಥಹಳ್ಳಿ ವಿಧಾನಸಭಾ ಕ್ಷೇತ್ರದಿಂದ ಸ್ಪರ್ಧಿಸಿ ಗೆಲುವನ್ನು ಸಾಧಿಸಿದರು. ಹಾಗೆಯೇ ಮೂರನೇ ಬಾರಿ 1967 ರ ಚುನಾವಣೆಯಲ್ಲಿಯೂ ಸ್ಪರ್ಧಿಸಿ ಗೆಲುವನ್ನು ಸಾಧಿಸುವುದರ ಮೂಲಕ ಮೂರನೇ ಬಾರಿ ಶಾಸಕರಾಗಿ ಆಯ್ಕೆ ಆದರು. ಈ ಎಲ್ಲಾ ಚುನಾವಣೆಗಳಲ್ಲಿನ

ಗೆಲುವು ಹಲವಾರು ರೂಪದಲ್ಲಿ ಶ್ರಮಿಕ ವರ್ಗದವರ ಗೆಲುವಿಗೆ ಕಾರಣವಾಯಿತೆನ್ನಬಹುದು. ಹೀಗೆ ಈ ಮೂರು ಅವಧಿಯ ಶಾಸನ ಸಭೆಯ ಪ್ರವೇಶ ಗೋಪಾಲಗೌಡರ ರಾಜಕೀಯ ಹೋರಾಟ ಮತ್ತು ಸಾಧನೆಗೆ ಅವಕಾಶವನ್ನು ಮಾಡಿಕೊಟ್ಟಿತು. ಈ ಅವಕಾಶವನ್ನು ಸದ್ಬಳಕೆ ಮಾಡಿಕೊಂಡ ಇವರು ತುಳಿತಕ್ಕೊಳಗಾದವರ, ಶ್ರಮಿಕರ ಪರವಾದ ಅನೇಕ ಶಾಸನ ಮತ್ತು ಕಾರ್ಯಕ್ರಮಗಳನ್ನು ರೂಪಿಸಲು ಪ್ರಾಮಾಣಿಕ ಪ್ರಯತ್ನ ಮಾಡಿದರು. ರೈತ ಸಂಘಟನೆ, ಭೂಸುಧಾರಣಾ ಶಾಸನ, ಇನಾಂ ರದ್ಧತಿ, ಕಾರ್ಮಿಕ ಸಮಸ್ಯೆ , ವಿದ್ಯುತ್ ನೌಕರರ ಸಮಸ್ಯೆ, ವಿದ್ಯಾಭ್ಯಾಸ ಪದ್ಧತಿಯ ಸುಧಾರಣೆ, ಉಪಾಧ್ಯಾಯರ ಜೀವನ ಮಟ್ಟ ಮತ್ತು ಅದರ ಪರಿಹಾರ, ಸಾರಿಗೆ ಸಂಪರ್ಕ ಮತ್ತು ಬ್ಯಾಂಕುಗಳ ರಾಷ್ಟ್ರೀಕರಣ ಇಂತಹ ಹತ್ತು ಹಲವು ವಿಚಾರಗಳನ್ನು ಶಾಸನ ಸಭೆಯಲ್ಲಿ ಪ್ರಸ್ತಾಪಿಸಿ ಸಮಸ್ಯೆಗಳ ಪರಿಹಾರಕ್ಕೆ ಪ್ರಯತ್ನಿಸಿದರು.

ಹೀಗೆ ಗೋಪಾಲಗೌಡರು ಹುಟ್ಟಿದ ಪರಿಸರ, ಬೆಳೆದ ವಾತಾವರಣ, ಸಮಕಾಲೀನರ ಪ್ರೋತ್ಸಾಹ, ರಾಷ್ಟ್ರೀಯ -ಅಂತರ ರಾಷ್ಟ್ರೀಯ ನಾಯಕರ ತತ್ವಾದರ್ಶಗಳು, ಭಾರತದ ಸ್ವಾತಂತ್ರ್ಯ ಸಂಗ್ರಾಮದ ಘಟನಾವಳಿಗಳು, ಕಾಗೋಡು ಸತ್ಯಾಗ್ರಹ ಇಂತಹ ಹಲವಾರು ಅಂಶಗಳು ಗೋಪಾಲಗೌಡರನ್ನು ರಾಜಕೀಯ ಪ್ರವೇಶಿಸಲು ಮತ್ತು ರಾಜಕೀಯ ಹೋರಾಟದಲ್ಲಿ ಪಾಲ್ಗೊಳ್ಳುವಂತೆ ಪ್ರೇರೇಪಿಸಿದವು. ಇವರು ಕರ್ನಾಟಕ ರಾಜ್ಯದ ವಿಧಾನಸಭೆಗೆ ಶಾಸಕರಾಗಿ ಆಯ್ಕೆ ಆಗಿರುವುದು ಇವರ ರಾಜಕೀಯ ಸಾಧನೆಗೆ ಸೂಕ್ತ ಅವಕಾಶ ಮತ್ತು ವೇದಿಕೆಯನ್ನು ಒದಗಿಸಿಕೊಟ್ಟಿತು ಎನ್ನಬಹುದು. ಈ ಎಲ್ಲಾ ಅಂಶಗಳಿಂದ ಪ್ರೇರಿತರಾದ ಗೋಪಾಲಗೌಡರು ತಮಗೆ ಸಿಕ್ಕ ಅವಕಾಶವನ್ನು ಪ್ರಾಮಾಣಿಕವಾಗಿ ಮತ್ತು ಯೋಗ್ಯ ರೀತಿಯಲ್ಲಿ ಬಳಸಿಕೊಂಡ ಸಮಾಜವಾದದ ಅನುಷ್ಠಾನಕ್ಕೆ ಪ್ರಾಮಾಣಿಕ ಪ್ರಯತ್ನ ಮಾಡುವುದರ ಮೂಲಕ ಕರ್ನಾಟಕದ ರಾಜಕಾರಣದಲ್ಲಿ ಒಂದು ಹೊಸ ಶಕೆಯನ್ನು ಪ್ರಾರಂಭಿಸಿದರು.

## ಅಧ್ಯಾಯ -7

# ಶಾಸಕರಾಗಿ ಗೋಪಾಲಗೌಡರ ಹೋರಾಟ ಮತ್ತು ಸಾಧನೆಗಳು

ಶಾಂತವೇರಿ ಗೋಪಾಲಗೌಡರು ತಮ್ಮ ವಿದ್ಯಾರ್ಥಿ ಜೀವನದಲ್ಲಿಯೇ ವಿಭಿನ್ನ ವಿಧವಾದ ಚಳುವಳಿ, ಸತ್ಯಾಗ್ರಹ, ಹೋರಾಟದಲ್ಲಿ ಪಾಲ್ಗೊಂಡು ಅಸಮಾನತೆ, ಅಂಧಕಾರ, ಶೋಷಣೆ ಇವುಗಳನ್ನು ನಿವಾರಿಸುವ ಪ್ರಯತ್ನದಲ್ಲಿ ತೊಡಗಿದ್ದರು. ಹಾಗೂ ಹೋರಾಟದ ಮನೋಭಾವವನ್ನು ಬೆಳೆಸಿಕೊಂಡಿದ್ದರು. ಇವರು ಶಾಸನ ಸಭೆ ಪ್ರವೇಶಿಸುವುದಕ್ಕಿಂತ ಮುನ್ನವೇ ಭಾರತದಲ್ಲಿ ಸಮಾಜವಾದಿ ಸಮಾಜವನ್ನು ನಿರ್ಮಿಸಬೇಕು ಎಂಬ ಗುರಿಯನ್ನು ಹೊಂದಿ ಸಮಾಜದಲ್ಲಿರುವ ಅನೇಕ ಮೌಢ್ಯಾಚರಣೆಗಳ ವಿರುದ್ಧ ಹೋರಾಟಗಳನ್ನು ನಡೆಸಿದ್ದರು. ಶೋಷಣಾರಹಿತ ಸಮಾಜ ನಿರ್ಮಾಣ ಮಾಡುವ ಉದ್ದೇಶದಿಂದ ಕರ್ನಾಟಕದ ಜನಜೀವನಕ್ಕೆ ಸರಿಹೊಂದುವ ಒಂದು ವ್ಯವಸ್ಥಿತ ಸಮಾಜವಾದಿ ತತ್ವವನ್ನು ರೂಪಿಸಿಕೊಂಡಿದ್ದರು. ಇವರ ಶಾಸನ ಸಭೆಯ ಪ್ರವೇಶ ಸಮಾಜವಾದಿ ತತ್ವಗಳನ್ನು ಅನುಷ್ಠಾನಗೊಳಿಸಲು ಮತ್ತು ರಾಜಕೀಯ ಸಾಧನೆಗೆ ಸೂಕ್ತ ಅವಕಾಶವನ್ನು ಮಾಡಿಕೊಟ್ಟಿತು.

ಗೋಪಾಲಗೌಡರು 1952, 1962 ಮತ್ತು 1967 ರ ಶಾಸನ ಸಭೆಯ ಚುನಾವಣೆಗಳಲ್ಲಿ ಸಮಾಜವಾದಿ ಪಕ್ಷದ ಅಭ್ಯರ್ಥಿಯಾಗಿ ಸ್ಪರ್ಧಿಸಿ, ಸಮಾಜವಾದಿ ತತ್ವದ ಆಧಾರದ ಮೇಲೆ ಗೆಲುವನ್ನು ಸಾಧಿಸಿ ಶಾಸನ ಸಭೆಯ ಸದಸ್ಯರಾಗಿ ಆಯ್ಕೆಯಾದರು. ಆದರೆ ಆಗ ತಾನೆ ಜನ್ಮ ತಾಳಿದ ಪಕ್ಷ ಸಮಾಜವಾದಿ ಪಕ್ಷವಾದ್ದರಿಂದ ಅದು ಎಂದೂ ಆಡಳಿತ ಪಕ್ಷವಾಗಿ ಹೊರಹೊಮ್ಮ ಲಿಲ್ಲ. ಆದ್ದರಿಂದ ಮುರು ಬಾರಿ ಶಾಸಕರಾಗಿ ಆಯ್ಕೆ ಆದರೂ ವಿರೋಧ ಪಕ್ಷದ ಸ್ಥಾನದಲ್ಲಿಯೇ ಕಾರ್ಯ ನಿರ್ವಹಿಸಬೇಕಾಯಿತು. ಆದರೂ ವಿರೋಧ ಪಕ್ಷದ ಸ್ಥಾನದಲ್ಲಿದ್ದುಕೊಂಡೆ ತಮ್ಮ ಸತತ ಹೋರಾಟ ಮತ್ತು ಪ್ರಯತ್ನಗಳ ಮೂಲಕ ದೀನದಲಿತರ, ಬಡವರ ಪರವಾದ ಶಾಸನಗಳನ್ನು ಅಂಗೀಕರಿಸುವಲ್ಲಿ ಕಾರ್ಯಕ್ರಮಗಳನ್ನು ರೂಪಿಸುವಲ್ಲಿ ಯಶಸ್ವಿಯಾದರು. ಇವರು ಶೋಷಿತರ, ಕಡು ಬಡವರ ಪರವಾದ ಹಾಗೂ ಸಮಾಜವಾದದ ಪರವಾದ ಹಲವಾರು ಖಾಸಗಿ ಮಸೂದೆಗಳನ್ನು ಮಂಡಿಸಿ ತಮ್ಮ ವಾಕ್ ಚಾತುರ್ಯ ಮತ್ತು ಸಮಾಜವಾದದ ನಿರ್ದಿಷ್ಟ ತತ್ವವನ್ನು ಆಧಾರವಾಗಿಟ್ಟುಕೊಂಡು ಸರ್ಕಾರದ ಮೇಲೆ ಒತ್ತಡ ಹಾಕಿ ಅವುಗಳನ್ನು

ಅಂಗೀಕರಿಸುವಂತೆ ಪ್ರಯತ್ನಿಸಿದರು. ಜೊತೆಗೆ ಸರ್ಕಾರಿ ಮಸೂದೆಗಳನ್ನು ಮಂಡಿಸಿದಾಗಲೂ ಆ ಮಸೂದೆಗಳೂ ಸಮಾಜವಾದಿ ತತ್ವವನ್ನಾಧರಿಸಿ ಸಮಾಜದ ಆಮೂಲಾಗ್ರ ಬದಲಾವಣೆಗೆ ಪೂರಕವಾಗಿರುವಂತೆ ಶಾಸನ ಸಭೆಯಲ್ಲಿ ಒತ್ತಡ ಹಾಕುತ್ತಿದ್ದರು. ಮತ್ತು ಬಂಡವಾಳಶಾಹಿತ್ವ, ಅಸಮಾನತೆ ವಿರುದ್ಧ ನಿರಂತರ ಹೋರಾಡುತ್ತಿದ್ದರು.

ಗೋಪಾಲಗೌಡರು ಶಾಸನ ಸಭೆಯ ಒಳಗೆ ಮಾಡಿದ ಭಾಷಣ, ಚರ್ಚೆಗಳು ಹಾಗೂ ಶಾಸನ ಸಭೆಯ ಹೊರಗೆ ಮಾಡಿದ ಅನೇಕ ಹೋರಾಟಗಳಿಂದ ರಾಜ್ಯದಲ್ಲಿ ಹಲವು ಸುಧಾರಣೆಗಳನ್ನು ತರಲು ಯಶಸ್ವಿಯಾಗಿದ್ದಾರೆ. ಅಂತಹ ಪ್ರಮುಖ ಸಾಧನೆಗಳೆಂದರೆ,



**1.ರಾಜಧನ ರದ್ಧತಿ :**

ಗೋಪಾಲಗೌಡರು ಶಾಸನ ಸಭೆಯಲ್ಲಿ ಮಾಡಿದ ಮೊದಲ ಹೋರಾಟ ಎಂದರೆ ರಾಜಧನ ರದ್ಧತಿ. ಮುಖ್ಯಮಂತ್ರಿಗಳು ಮಂಡಿಸಿದ ಆಯ -ವ್ಯಯ ಪಟ್ಟಿಯನ್ನು ಕುರಿತು ಮಾತನಾಡುತ್ತಾ ಮುಖ್ಯಮಂತ್ರಿಗಳು ನಾವು ಶತಮಾನಗಳ ಕಾಲ ಗುಲಾಮಗಿರಿ ಮತ್ತು ಇತರ ವಿಚಾರಗಳ ವಿರುದ್ಧ ಹೋರಾಡಿದ್ದೇವೆ. ಭವಿಷ್ಯದಲ್ಲಿ ಇಂತಹ ಪರಿಸ್ಥಿತಿ ಎದುರಾಗಬಾರದು. ಅದಕ್ಕೆ ನನ್ನ ಜೀವನದಲ್ಲಿಯೇ ಮಹತ್ವದ ಬಜೆಟ್ಟನ್ನು ಮಂಡಿಸಿದ್ದೇನೆ ಎಂದಿದ್ದಾರೆ. ಆದರೆ ಇಂದು ಡಾಮಿನೇಷನ್ ಮತ್ತು ಎಕ್ಸ್‌ಪ್ಲಾಯಿಟೇಷನ್ ಈ ಎರಡು ಶೋಷಣೆಗಳಿಂದ ಸಾಮಾನ್ಯ ಜನ ತಪ್ಪಿಸಿಕೊಳ್ಳಲು ಸಾಧ್ಯವಾಗಿಲ್ಲ. ನಮ್ಮಲ್ಲಿ ಏಕನಾಯಕತ್ವ ಕೊನೆಗೊಂಡಿದ್ದರೂ ಶೇ.60 ರಷ್ಟು ಜನ ಬಡತನ ರೇಖೆಗಿಂತ ಕೆಳಗಿದ್ದು, ಬಡತನ ಮತ್ತು ಹಣದ ಕೊರತೆಯಿಂದ ತೊಳಲಾಡುತ್ತಿದ್ದಾರೆ. ಇಂತಹ ಸಂದರ್ಭದಲ್ಲೂ 24 ಲಕ್ಷ ರೂಪಾಯಿಗಳ ಮಾಸಾಶಸನವನ್ನು ರಾಜಮನೆತನದವರಿಗೆ ನೀಡುತ್ತಿದ್ದೇವೆ. ಇದನ್ನು ನಿಲ್ಲಿಸಬೇಕು, ಇದು ದೇಶದ ಪ್ರಗತಿಯ ದೃಷ್ಟಿಯಿಂದ ಒಳ್ಳೆಯದು ಎಂದು ವಾದಿಸಿದರು. ಕೊನೆಗೂ ರಾಜಧನ ರದ್ದಾಗಿರುವುದು ಇವರ ಪ್ರಯತ್ನದ ಫಲವೆಂದು ಹೇಳಬಹುದು.

ಇದಕ್ಕೆ ಪೂರಕವಾದ ಗೋಪಾಲಗೌಡರ ಇನ್ನೊಂದು ಪ್ರಯತ್ನವೆಂದರೆ ಆಡಂಬರದ

ಮೈಸೂರು ದಸರಾ ಉತ್ಸವವನ್ನು ವಿರೋಧಿಸಿ ಏಕಾಂಗಿಯಾಗಿ ಅದರ ವಿರುದ್ಧ ಹೋರಾಡಿದರು. ಇಂತಹ ಅದ್ದೂರಿಯ ಉತ್ಸವ - ರಾಜಮನೆತನದವರನ್ನು ವಿಶಿಷ್ಟವಾಗಿ ಗೌರವಿಸುವ ಇಂತಹ ಕಾರ್ಯಕ್ರಮಗಳನ್ನು ಕೈಬಿಡಬೇಕೆಂದು ಅದನ್ನು ಏಕಾಂಗಿಯಾಗಿ ಕಪ್ಪು ಬಾವುಟ ಹಿಡಿದು ವಿರೋಧಿಸಿರುವುದನ್ನು ನೋಡಬಹುದು.

**1. ಪ್ರಾಥಮಿಕ ಶಿಕ್ಷಣ :**

ಪ್ರಾಥಮಿಕ ಶಿಕ್ಷಣಕ್ಕೆ ಮೊದಲ ಆದ್ಯತೆ ನೀಡಬೇಕು ಎಂಬುವುದು ಗೋಪಾಲಗೌಡರ ಖಚಿತ ನಿಲುವಾಗಿತ್ತು. ಭಾರತವನ್ನು ಭವ್ಯ ರಾಷ್ಟ್ರವನ್ನಾಗಿ ನಿರ್ಮಾಣ ಮಾಡಬೇಕೆಂದರೆ, ಅದಕ್ಕೆ ಪ್ರಾಥಮಿಕ ಶಿಕ್ಷಣವೇ ಅಡಿಪಾಯ. ಪ್ರಾಥಮಿಕ ಶಿಕ್ಷಣ ಎಷ್ಟು ಚೊಕ್ಕವಾಗಿ, ಗಟ್ಟಿಯಾಗಿ, ಆದರ್ಶ ಪೂರ್ಣವಾಗಿದ್ದರೆ ಇದರ ಮೇಲೆ ಕಟ್ಟುವ ರಾಷ್ಟ್ರವೂ ಕೂಡ ಅಷ್ಟೇ ಭದ್ರವಾಗಿರುತ್ತದೆ. ಆದ್ದರಿಂದ ನಮ್ಮ ಈಗಿನ ಶಿಕ್ಷಣ ಪದ್ಧತಿಯಲ್ಲಿ ಆಮೂಲಾಗ್ರವಾದ ಬದಲಾವಣೆಯಾಗಬೇಕು. ಆ ಬದಲಾವಣೆಗೆ ಹಣದ ಕೊರತೆ ಇದೆ ನಿಜ. ಆದರೆ ಆ ಕೊರತೆ ಹಣವನ್ನು ಸ್ಥಳೀಯ ಸಂಸ್ಥೆಗಳಿಂದಲೇ ಕ್ರೂಢೀಕರಿಸಬೇಕು ಮತ್ತು ಶಿಕ್ಷಣಕ್ಕಾಗಿ ಮಾಡುವ ವೆಚ್ಚವನ್ನು ವಿಂಗಡಿಸಿ ಪ್ರಾಥಮಿಕ ಶಿಕ್ಷಣಕ್ಕೆ ದೊಡ್ಡ ಮೊತ್ತವನ್ನು ತೆಗೆದಿಟ್ಟು ಅದನ್ನು ವ್ಯವಸ್ಥಿತವಾಗಿ ಬಳಸಬೇಕು ಎಂಬುವುದು ಇವರ ನಿಲುವು.

ಪ್ರಾಥಮಿಕ ಶಾಲೆಗಳ ಉಪಾಧ್ಯಾಯರ ಸಂಬಳ ಬಹಳ ಕಡಿಮೆ ಇದೆ. ಇಂದು ಈ ಶಿಕ್ಷಕರ ಪರಿಸ್ಥಿತಿ ತೀರಾ ಕೆಳಮಟ್ಟದಲ್ಲಿದೆ ಎಂಬುವುದು ಎಲ್ಲರಿಗೂ ತಿಳಿದ ವಿಷಯ. ಆದ್ದರಿಂದ ಪ್ರಾಥಮಿಕ ಶಾಲೆಗೆ ಬರುವ ಉಪಾಧ್ಯಾಯರು ಕೇವಲ ಹೊಟ್ಟೆಪಾಡಿಗಾಗಿ ಬರುತ್ತಾರೆಯೇ ವಿನಃ ಅವರಲ್ಲಿ ಮಕ್ಕಳಿಗೆ ಬೋಧಿಸುವ ಜ್ಞಾನವಾಗಲಿ, ಸಾಮರ್ಥ್ಯವಾಗಲಿ ಇರುವುದಿಲ್ಲ. ಇಂತಹವರಿಂದ ನಿರೀಕ್ಷಿಸಿದಷ್ಟು ಜ್ಞಾನವನ್ನು ಮಕ್ಕಳಿಗೆ ಕೊಡಿಸಲು ಸಾಧ್ಯವಿಲ್ಲ. ಆದ್ದರಿಂದ ಇದನ್ನು ಕೂಡ ಮೂಲವಾಗಿ ಬದಲಾಯಿಸಿ ನಮ್ಮ ಶಿಕ್ಷಣದ ಪದ್ಧತಿಯನ್ನು ಹೊಸದಾಗಿ ಮಾರ್ಪಡಿಸ ಬೇಕು ಎಂಬುವುದು ಗೋಪಾಲಗೌಡರ ವಾದ. ಇವರ ಪ್ರಕಾರ ಎಂತಹವರು ಉಪಾಧ್ಯಾಯ ವೃತ್ತಿಗೆ ಬರಬೇಕೆಂದರೆ, " ಮಕ್ಕಳ ಹಸಿವಿನಂತಹ ಮನಸ್ಸನ್ನು ಅರ್ಥಮಾಡಿಕೊಳ್ಳುವಂತಹವರು,

ಆ ಮಕ್ಕಳ ಕೋಮಲ ಬುದ್ಧಿ ವಿಕಾಸವಾಗುವಂತೆ ಮಕ್ಕಳನ್ನು ಹೆದರಿಸದೆ, ಚಿಕ್ಕ ಮಕ್ಕಳ ಮನಸ್ಸನ್ನು ಅರಿತುಕೊಂಡು ಪಾಠ ಹೇಳತಕ್ಕಂಥ ಚೈತನ್ಯವಿರುವವರು ; ಅಂದರೆ ಮನಃಶಾಸ್ತ್ರವನ್ನು ಬಲ್ಲಂತಹ ಹೆಚ್ಚಿನ ಪ್ರಪಂಚ ಜ್ಞಾನವುಳ್ಳವರನ್ನೇ ನೇಮಕ ಮಾಡಿಕೊಳ್ಳಬೇಕು ''* ಇಂತಹ ಶ್ರೇಷ್ಠ ಉಪಾಧ್ಯಾಯರನ್ನು ಕೆಲಸಕ್ಕೆ ನೇಮಿಸಿಕೊಂಡು ಅವರಿಗೆ ಗೌರವಯುತ ವೇತನ ನೀಡಬೇಕು. ಆಗ ಮಾತ್ರ ಶಿಕ್ಷಣದ ಗುಣಮಟ್ಟ ಹೆಚ್ಚಿಸಲು ಸಾಧ್ಯ ಎಂಬುವುದು ಇವರ ಖಚಿತ ನಿಲುವು.

**3. ಭೂ ಸುಧಾರಣೆ ಮತ್ತು ಇನಾಂ ರದ್ದಿಯಾತಿ :**

ಭಾರತ ದೇಶದ ವಿವಿಧ ರಾಜ್ಯ ಸರ್ಕಾರಗಳು ಹಾಗೂ ಕೇಂದ್ರ ಸರ್ಕಾರ ಭೂಸುಧಾರಣೆ ಬಗ್ಗೆ ಯೋಚಿಸಲು ಮತ್ತು ಭೂಸುಧಾರಣಾ ಕಾಯಿದೆಯನ್ನು ರಚಿಸುವಲ್ಲಿ ಪ್ರೇರಕವಾದ ಅಂಶ ಎಂದರೆ, ಗೋಪಾಲಗೌಡರ ನೇತೃತ್ವದಲ್ಲಿ ನಡೆದ 'ಕಾಗೋಡು ಸತ್ಯಾಗ್ರಹ ' ಅಂತೆಯೇ ಕರ್ನಾಟಕ ರಾಜ್ಯದಲ್ಲಿಯೂ ಕಾಗೋಡು ಚಳುವಳಿಯ ಘೋಷಣೆಯಾದ 'ಉಳುವವನೇ ಹೊಲದೊಡೆಯ ' ಎಂಬ ತತ್ವವನ್ನಾಧರಿಸಿ ಭೂಸುಧಾರಣೆ ಕಾಯಿದೆಯನ್ನು ಜಾರಿಗೊಳಿಸುವಲ್ಲಿ ಗೋಪಾಲಗೌಡರ ಪ್ರಯತ್ನ ಮತ್ತು ಪ್ರಭಾವ ವಿಶೇಷವಾಗಿತ್ತು. ಇವರು ಒಂದು ವ್ಯವಸ್ಥಿತವಾದ ಮತ್ತು ಗೇಣಿ ರೈತರ ಪರವಾದ ಕಾಯಿದೆ ಜಾರಿಯಾಗುವಂತೆ ಪ್ರಯತ್ನಿಸಿದರು. ಕಾಯಿದೆ ರಚನೆಗೆ ಮೊದಲು ರಾಜ್ಯದ ಉಳುವ ಜಮೀನಿನ ಸರ್ವೆಯಾಗಬೇಕು. ಅದರಲ್ಲಿ ಗೇಣಿದಾರರಿಗೆ ಸೇರಿರುವ ಜಮೀನೆಷ್ಟು , ಭೂ ಮಾಲೀಕರ ನೇರ ಉಳುಮೆಗೆ ಸೇರಿದೆಷ್ಟು , ಸಂಸ್ಥೆಗಳ ಒಡೆತನದಲ್ಲಿ ಎಷ್ಟಿದೆ ಎಂಬುದನ್ನು ತಿಳಿದು ನಂತರ ಅದನ್ನು ಪುನರ್ ಹಂಚಿಕೆ ಮಾಡಬೇಕು. ಹಂಚುವಾಗ ಮೊದಲು ರೈತರಿಂದ ಪ್ರಾರಂಭವಾಗಿ ರೈತರ ಅನಾನುಕೂಲಗಳು ಪರಿಹಾರವಾದ ಮೇಲೆ ಜಮೀನ್ದಾರನ ಒಡೆತನದ ಗರಿಷ್ಠ ಮಿತಿಯನ್ನು ನಿರ್ಧರಿಸಿ ಹೆಚ್ಚಿನ ಭೂಮಿಯನ್ನು ಭೂರಹಿತರಿಗೆ ಹಂಚಬೇಕು. ಆಗ ರೈತಾಪಿ ವರ್ಗದ ಬಹಳಷ್ಟು ಸಮಸ್ಯೆಗಳು ಬಗೆಹರಿಯುತ್ತವೆ ಎಂದು ತಮ್ಮ ನಿಲುವನ್ನು ವ್ಯಕ್ತಪಡಿಸಿದರು.

ಭೂಮಾಲೀಕರು ಭೂಮಿಯನ್ನು ಕಳೆದುಕೊಂಡುದಕ್ಕೆ ಅವರಿಗೆ ಪರಿಹಾರವನ್ನು ನೀಡಲು

---

*ಗೋಪಾಲಗೌಡ ನೆನಪಿನ ಸಂಪುಟ -ಸಂ.-ಕಾಳೇಗೌಡ ನಾಗವಾರ, ಶಾಸನ ಸಭೆಯ ಭಾಷಣಗಳು ಜಿ.ವಿ. ಆನಂದಮೂರ್ತಿ.

ಸರ್ಕಾರ ಮುಂದಾದಾಗ ಇವರು ಅದನ್ನು ವಿರೋಧಿಸಿ ಇಲ್ಲಿಯವರೆಗೆ ಸರ್ವಮಾನ್ಯಗಳನ್ನು ಅನುಭವಿಸಿಕೊಂಡು ಬಂದಿರುವ ಮಾಲೀಕರೆ ಸರ್ಕಾರ ಮತ್ತು ರೈತರಿಗೆ ಪರಿಹಾರ ಕೊಡಬೇಕು ಎಂಬ ಪರಿಸ್ಥಿತಿ ಇದೆ. ಕಾರಣ ಸರ್ಕಾರದ ತುರ್ತು ಯೋಜನೆಗಳಿಗೆ ಬಹಳಷ್ಟು ಹಣ ಬೇಕು. ಆ ಹಣ ಸರ್ಕಾರದಲ್ಲಿಲ್ಲ. ಈಗಿರುವ ಬಡ ರೈತರು ತೆರಿಗೆಯನ್ನು ಕೊಡುವ ಸ್ಥಿತಿಯಲ್ಲಿಲ್ಲ. ಅವರು ಹೆಚ್ಚು ಎಂದರೆ ದೇಶಕ್ಕಾಗಿ ದುಡಿಯಬಲ್ಲರು ಅಷ್ಟೆ. ಹಣದ ರೂಪದಲ್ಲಿ ಯಾವ ತೆರಿಗೆಯನ್ನು ಕೊಡುವ ಪರಿಸ್ಥಿತಿಯಲ್ಲಿಲ್ಲ. ಆದ್ದರಿಂದ ಈ ಅಂಶವನ್ನು ಗಮನದಲ್ಲಿಟ್ಟುಕೊಂಡು ಯಾರು ಕೇವಲ (ಗೇಣಿ) ಇನಾಂತಿಯಿಂದಲೇ ಜೀವನ ಮಾಡಿಕೊಂಡಿದ್ದಾರೋ, ಯಾರು ಈ ಇನಾಂತಿ ರದ್ದಾಗುವುದರಿಂದ ಜೀವನಕ್ಕೆ ಆಸ್ಪದವಿಲ್ಲದ ಸ್ಥಿತಿ ತಲುಪುತ್ತಾರೋ ಅಂತಹವರಿಗೆ ಮಾತ್ರ ಪರಿಹಾರ ನೀಡಬೇಕು. ಈ ಪರಿಹಾರವನ್ನು ಸಾರ್ವತ್ರಿಕವಾಗಿ ನೀಡಿದರೆ ಅದು ಸರ್ಕಾರಕ್ಕೆ ತುಂಬಲಾರದ ಹೊರೆಯಾಗುತ್ತದೆ. ಜೊತೆಗೆ ಈ ಪರಿಹಾರದ ಹಣವನ್ನು ರೈತರಿಂದಲೂ ವಸೂಲಿ ಮಾಡಬಾರದು. ಹೀಗಾಗಿ ರೈತರಿಗೂ, ಭೂಮಾಲೀಕರಿಗೂ ಅನ್ಯಾಯವಾಗದ, ಸರ್ಕಾರಕ್ಕೂ ಹೊರೆಯಾಗದ ಪರಿಹಾರ ಕ್ರಮವನ್ನು ರೂಪಿಸಿಕೊಳ್ಳಬೇಕೆಂದು ಸರ್ಕಾರವನ್ನು ಒತ್ತಾಯಿಸಿದರು.

**4. ನಿಮ್ನ ವರ್ಗದ ಏಳಿಗೆ :**

ಭಾರತದಲ್ಲಿ ನಿಮ್ನ ವರ್ಗದವರು ನೂರಾರು ವರ್ಷಗಳಿಂದ ಇತರ ಜನಾಂಗಗಳ ಅಭಿವೃದ್ಧಿಗೆ ಕೊಟ್ಟಿರುವಂತಹ ಸಾಲವನ್ನು ತೀರಿಸುವುದಕ್ಕೆ ನಾವೆಲ್ಲರೂ ತೆರಬೇಕಾದ ಋಣ ಬಹಳ ಇದೆ ಎಂಬ ಮಾತನ್ನು ಹೇಳುತ್ತಾ, ನಾವು ಯಾವುದೇ ಪಟ್ಟಣ -ಹಳ್ಳಿಗಳಿಗೆ ಹೋದರೂ ಅಲ್ಲಿ ಒಂದು ಹೊಲಗೇರಿ ಇದ್ದೇ ಇರುತ್ತದೆ. ಇದು ಹಿಂದೂ ಸಂಸ್ಕೃತಿಗೆ ಒಂದು ಕಳಂಕ. ಈ ಕಳಂಕವನ್ನು ಹೋಗಲಾಡಿಸಬೇಕೆಂದರೆ, ಉಳಿದ ಜನಾಂಗಗಳು ಅವರ ಅಭಿವೃದ್ಧಿಗೆ ಸಹಕರಿಸಬೇಕು. ಈ ವರ್ಗವನ್ನು ಎಲ್ಲಿಯವರೆಗೆ ಮೇಲ್ಮಟ್ಟಕ್ಕೆ ಎತ್ತುವುದಿಲ್ಲವೋ ಅಲ್ಲಿಯವರೆಗೆ ನಮ್ಮ ದೇಶ ಖಂಡಿತಾ ಪ್ರಗತಿ ಆಗಲಾರದು. ನಮ್ಮ ರಾಜ್ಯಾಂಗದಲ್ಲಿ ಆ ವರ್ಗದ ಪ್ರಗತಿಗೆ ಪೂರಕವಾದ ನಿಯಮಗಳಿವೆ. ಆದರೆ ಇವೆಲ್ಲವೂ ಕಾಗದದ ಮೇಲಿನ ಅವಕಾಶಗಳಾಗಿವೆ. ಆದ್ದರಿಂದ ನಮ್ಮ ದೇಶದ ಮಹಾಜನರೂ, ವಿಧಾನ ಸಭೆಗಳೂ ತೀವ್ರ ಗಮನ ಕೊಟ್ಟು ಕಾನೂನು ರೀತ್ಯ ಅವರಿಗೆ ಏನೇನು ಸೌಲತ್ತುಗಳು ಸಿಗಬೇಕೋ ಅವುಗಳೆಲ್ಲವನ್ನು ಕೊಡುವಂತೆ

ಮಾಡುವುದು ಎಲ್ಲಾ ಸರ್ಕಾರಗಳ ಆದ್ಯ ಕರ್ತವ್ಯವೆಂದು ಹೇಳಿದರು.

ನಮ್ಮ ರಾಜ್ಯಾಂಗದಲ್ಲಿ ನಿಮ್ಮ ವರ್ಗದವರ ಏಳಿಗೆಗೆ ಅನೇಕ ಸೌಲತ್ತುಗಳಿದ್ದರೂ ಸಮಾಜದಲ್ಲಿ ಅವರನ್ನು ಜೀತದಾಳುಗಳನ್ನಾಗಿ ದುಡಿಸಿಕೊಳ್ಳುತ್ತಿದ್ದಾರೆ. ಹರಿಜನರು ದೇವಸ್ಥಾನಕ್ಕೆ ಹೋಗುವುದಿರಲಿ, ಸಾರ್ವಜನಿಕ ಬಾವಿ, ಬಸ್‌ಸ್ಟ್ಯಾಂಡ್, ಹೋಟೆಲ್‌ಗಳನ್ನು ಬಳಸಿಕೊಳ್ಳದ ಸ್ಥಿತಿ ಇನ್ನೂ ಇದೆ. ಇದನ್ನು ನೋಡಿದಾಗ ನಾವು ಪ್ರಜಾಪ್ರಭುತ್ವವನ್ನು ಆಚರಿಸುತ್ತಿದೇವೆ ಎಂದು ಹೇಳಿಕೊಳ್ಳಲು ನಾಚಿಕೆ ಎನಿಸುತ್ತದೆ. ಹೀಗಾಗಿ ಇಂತಹ ಸಾಮಾಜಿಕ ವಾತಾವರಣವನ್ನು ಮಾರ್ಪಡಿಸಬೇಕೆಂದರೆ ಮೊದಲು ಈ ವರ್ಗದ ಆರ್ಥಿಕ ಸುಧಾರಣೆಯಾಗಬೇಕು. ಜೊತೆಗೆ ಅವರ ಬಗ್ಗೆ ಒಂದು ಸರ್ವೆ ನಡೆಸಿ ಅವರ ಕುಂದು -ಕೊರತೆ, ಅವರ ಆರ್ಥಿಕ ಮಟ್ಟ ಉದ್ಯೋಗಗಳೇನು ಎಂಬುದನ್ನು ತಿಳಿದು ಅವರ ಏಳಿಗೆಗೆ ಸೂಕ್ತ ಸೌಲತ್ತುಗಳನ್ನು ಸರ್ಕಾರ ಒದಗಿಸಬೇಕು ಮತ್ತು ಕಾನೂನು ರೀತ್ಯ ಅವರಿಗಿರುವ ಸೌಕರ್ಯಗಳೇನೆಂಬುದನ್ನು ಪ್ರಚಾರ ಮಾಡಿ ಅವರಿಗೆ ಮನದಟ್ಟು ಮಾಡಬೇಕು. ಈ ನಿಟ್ಟಿನಲ್ಲಿ ಸರ್ಕಾರದ ಜೊತೆಗೆ ಇತರ ಜನಾಂಗದವರು ಸಹಕರಿಸಬೇಕು ಎಂಬುದನ್ನು ಪ್ರಸ್ತಾಪಿಸುತ್ತಾ ಸರ್ಕಾರ ಇವರ ಕಲ್ಯಾಣಕ್ಕಾಗಿ ಒಂದು ಆಯೋಗವನ್ನು ರಚಿಸಬೇಕೆಂದು ಒತ್ತಾಯಿಸಿದರು. ಜೊತೆಗೆ ಸ್ವತಃ ಗೋಪಾಲಗೌಡರೇ ನಿಮ್ಮ ವರ್ಗದ ಏಳಿಗೆ ಕುರಿತು ವಿಭಿನ್ನ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದರು ಮತ್ತು ವರ್ಗಗಳ ನಡುವಿನ ಅಂತರವನ್ನು ಕಡಿಮೆ ಮಾಡಲು ಪ್ರಯತ್ನಿಸಿದರು.

**5. ಕರ್ನಾಟಕದ ಏಕೀಕರಣ :**

ಕರ್ನಾಟಕ ಏಕೀಕರಣಕ್ಕಿಂತ ಮೊದಲು ಮೈಸೂರು, ಹೈದರಾಬಾದ್, ಮುಂಬಾಯ್, ಕೊಡಗು, ದಕ್ಷಿಣ ಕನ್ನಡ ಪ್ರಾಂತ್ಯಗಳು ಬೇರೆ -ಬೇರೆಯಾಗಿಯೇ ಇದ್ದವು. ಗೋಪಾಲಗೌಡರು ಮೊದಲಿನಿಂದಲೂ ಸಮಗ್ರ ಏಕೀಕೃತ ಕರ್ನಾಟಕದ ಕನಸನ್ನು ಕಂಡವರು. ಹೀಗಾಗಿ 1955 ರ ಜೂನ್‌ನಲ್ಲಿ ವಿಧಾನಸಭೆಯಲ್ಲಿ ಕರ್ನಾಟಕ ರಾಜ್ಯ ನಿರ್ಮಾಣದ ವಿಷಯ ಕುರಿತ ಚರ್ಚೆಯಲ್ಲಿ ಪಾಲ್ಗೊಂಡ ಗೋಪಾಲಗೌಡರು ತಮ್ಮ ಭಾಷಣದಲ್ಲಿ ಸಮಗ್ರ ಏಕೀಕೃತ ಕರ್ನಾಟಕದ ನಿರ್ಮಾಣ ನಮ್ಮೆಲ್ಲರ ಗುರಿ - ಉದ್ದೇಶ ಆಗಿರಬೇಕು. ಅದಕ್ಕಾಗಿ ಕೆಲವು ತ್ಯಾಗಕ್ಕೂ ಸಿದ್ಧರಿಬೇಕು

ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ , ಮೈಸೂರು ಪ್ರಾಂತ್ಯದವರು ಹೈದರಾಬಾದ್ ಪ್ರಾಂತ್ಯವನ್ನು ಮೈಸೂರಿಗೆ ಸೇರಿಸಬಾರದು. ಅದು ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದ ಪ್ರಾಂತ್ಯ. ಆ ಪ್ರಾಂತ್ಯ ಸೇರಿದರೆ ಮುಂದೆ ತೊಂದರೆ ಅನುಭವಿಸಬೇಕಾಗುತ್ತದೆ ಎಂಬ ಅಭಿಪ್ರಾಯಕ್ಕೆ ಪ್ರತಿಯಾಗಿ ಭಾಷೆಯ ಆಧಾರದ ಮೇಲೆ ರಾಜ್ಯ ನಿರ್ಮಾಣ ಮಾಡುವಾಗ ಆರ್ಥಿಕ ಅಥವಾ ಶೈಕ್ಷಣಿಕ ಅಂಶಗಳನ್ನೇ ಮುಖ್ಯವಾಗಿ ಪರಿಗಣಿಸಬಾರದು. ಆ ಭಾಗದ ಜನರಲ್ಲಿ ಮೈಸೂರು ಭಾಗದ ಜನರಿಗಿಂತ ಶೇಕಡವಾರು ಶಿಕ್ಷಣ ಹೆಚ್ಚಾಗಿದೆ. ಆದರೆ ಅಲ್ಲಿ ಉರ್ದು ಶಾಲೆಗಳೇ ಹೆಚ್ಚಿರುವುದರಿಂದ ಉರ್ದು ಶಿಕ್ಷಣ ಪಡೆದವರಿದ್ದಾರೆ. ಕನ್ನಡದಲ್ಲಿನ ಶಿಕ್ಷಣ ಕಡಿಮೆ ಇರಬಹುದು. (ನಾವು ಒಂದು ರಾಜ್ಯ ಕಟ್ಟುವಾಗ ಕೇವಲ ಆರ್ಥಿಕ ಅಂಶ, ಶೈಕ್ಷಣಿಕ ಅಂಶಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಬಾರದು ). ಈ ಎಲ್ಲಾ ಭಾಗಗಳು ಒಂದು ಎನ್ನುವುದಕ್ಕೆ ಚಾರಿತ್ರಿಕ ಹಿನ್ನೆಲೆ ಇದೆ. ಭಾಷಾ ಸಂಸ್ಕೃತಿಯಿದೆ. ಭಾಷೆಯ ತಳಹದಿ ಇದೆ. ಹೀಗಾಗಿ ನಮ್ಮೆಲ್ಲರ ಬಾಳು ಹಸನಾಗಬೇಕಾದರೆ ಮುಂದೆ ಬಾಳಿ ಬದುಕಬೇಕಾದರೆ, ಕನ್ನಡ ಜನರೆಲ್ಲ ಒಳಗೊಂಡ ಕರ್ನಾಟಕ ನಿರ್ಮಾಣವಾಗಬೇಕು. ಇದಕ್ಕೆ ಆರ್ಥಿಕ ಅಥವಾ ಇತರ ಅಂಶಗಳು ತಡೆಯಾಗಬಾರದು. ನಾವುಗಳೆಲ್ಲರೂ ಭಾವನಾತ್ಮಕವಾಗಿ ಒಂದಾಗಬೇಕು. ಹೀಗಾದಾಗ ಅಖಿಲ ಕರ್ನಾಟಕ ಪ್ರಾಂತ್ಯ ದಕ್ಷಿಣ ಭಾರತದಲ್ಲಿ ಅತ್ಯಂತ ಸಂಪತ್ - ಸಮೃದ್ಧಿಯಿಂದ ಕೂಡಿದ ಪ್ರಾಂತ್ಯವಾಗುತ್ತದೆ. ಆಗ ಕರ್ನಾಟಕ ರಾಜ್ಯದ ಜನತೆಯು ಅಭಿವೃದ್ಧಿಯ ಜೊತೆಗೆ ಭಾರತಕ್ಕೆ ಹೆಚ್ಚಿನ ಶಕ್ತಿಯನ್ನು ಕೊಡಬಹುದು. ರಾಜ್ಯ ವಿಶಾಲವಾಗಿದ್ದಾಗ ಸಂಸತ್ತಿನಲ್ಲಿಯೂ ಹೆಚ್ಚು ಪ್ರಭಾವ ಬೀರಬಹುದು. ಆದ್ದರಿಂದ ಒಂದು ಭಾಷೆಯನ್ನಾಡುವ ಜನತೆಯಿರುವ ಒಂದು ಪ್ರದೇಶ ಯಾವುದೋ ಕಾರಣಗಳಿಂದಾಗಿ ಬೇರೆ ಬೇರೆ ಪ್ರಾಂತ್ಯಗಳಾಗದೆ ಅಖಂಡ ಕರ್ನಾಟಕ ನಿರ್ಮಾಣವಾಗಬೇಕು. ಅದಕ್ಕೆ ಎಲ್ಲರ ಸೌಹಾರ್ದವಿರಬೇಕು ಎಂಬುವುದು ಗೋಪಾಲಗೌಡರ ಸ್ಪಷ್ಟ ನಿಲುವು ಮತ್ತು ಅದಕ್ಕಾಗಿ ಅವಿರತ ಪ್ರಯತ್ನ ಮಾಡಿ ಬಹುತೇಕ ಯಶಸ್ಸನ್ನು ಕಂಡರು.

**6. ತೆರಿಗೆ ಪದ್ಧತಿ :**

ಕಾಂಗ್ರೆಸ್ ಸರ್ಕಾರದ ತೆರಿಗೆ ಪದ್ಧತಿ ವೈಜ್ಞಾನಿಕವಾಗಿಲ್ಲ ಮತ್ತು ದೇಶದಲ್ಲಿದ್ದ ಅಸಮಾನತೆಯನ್ನು ಹೋಗಲಾಡಿಸುವುದಕ್ಕೆ ಬದಲಾಗಿ ಅಸಮಾನತೆಗೆ ಅವಕಾಶ ಮಾಡಿಕೊಡುತ್ತಿದೆ

ಎಂಬ ವಿಷಯವನ್ನು ಪ್ರಸ್ತಾಪಿಸಿ ಅಂದಿನ ಮುಖ್ಯಮಂತ್ರಿಗಳು ತಮ್ಮ ತೆರಿಗೆ ನೀತಿಯನ್ನು ಸಮರ್ಥಿಸಿಕೊಂಡಾಗ ಇದನ್ನು ವಿರೋಧಿಸುತ್ತಾ ಗೋಪಾಲಗೌಡರು ಸರ್ಕಾರದ ಧೋರಣೆಯನ್ನು ಜನರ ಪರಿಸ್ಥಿತಿಯನ್ನು ಪದ್ಯದ ರೂಪದಲ್ಲಿ ವಿಷದಪಡಿಸಿದರು.

**" ಅಟ್ಟ ಏರಿದ ಮೇಲೆ ಏಣಿಯ ಹಂಗೇನು ?**
**ಗದ್ದುಗೆಯನ್ನೇರಿದ ಮೇಲೆ ಜನರ ಹಂಗೇನು ?**
**ನಾನು ಸರಕಾರ ; ನೀ ಪ್ರಜೆ !**
**ಕೊಡು ತೆರಿಗೆ - ಇಲ್ಲದಿರೆ ನಡೆ ಸೆರೆಮನೆಗೆ,**
**ಎಂದನಾ ಮೈಸೂರು ಮುಖ್ಯಮಂತ್ರಿ "**
**ಈಗ ಜನರ ಪರಿಸ್ಥಿತಿ ಪರಿತಾಪ ಯಾವ ರೀತಿ ಇದೆ ಎಂದರೆ,**
**" ಉಣಲಿಲ್ಲ , ಉಡಲಿಲ್ಲ**
**ದಂಡ ತೆರುವುದು ಮಾತ್ರ ನಿಲ್ಲಲಿಲ್ಲ !**
**ಬಿಡಲಾರೆ, ಬಿಡದಿರಲಾರೆ**
**ಈ ಕಾಂಗ್ರೆಸ್ ಗಂಡನಾ ಎಂದು**
**ಮರುಗಿತು ಮೈಸೂರು ಜನತೆ "***

ರಾಜ್ಯದ ಜನತೆಯ ಪರಿಸ್ಥಿತಿ ಮತ್ತು ನ್ಯಾಯಯುತವಲ್ಲದ ತೆರಿಗೆ ನೀತಿಯನ್ನು ಕುರಿತು ಮಾತನಾಡುತ್ತಾ ರಾಜ್ಯದ ಜನರೆಲ್ಲರೂ ತೆರಿಗೆ ಕೊಡಬೇಕಾದುದು ನಿಜ. ಆದರೆ ಎಲ್ಲರಿಗೂ ಸಮಾನ ತೆರಿಗೆ ವಿಧಿಸುವುದು ನ್ಯಾಯವಲ್ಲ. ಯಾರು ? ಯಾವಾಗ ತೆರಿಗೆಯನ್ನು ನೀಡಬೇಕೆಂದು ನಿರ್ಧರಿಸಿ ಒಂದು ಮಿತಿಗಿಂತ ಹೆಚ್ಚಿನ ಉತ್ಪತ್ತಿ ಹೊಂದಿದವರು ಹೆಚ್ಚಿನ ತೆರಿಗೆಯನ್ನು ನೀಡಬೇಕು. ಕಾರಣ ಯಾರು ಅವಶ್ಯಕತೆಗಿಂತ ಹೆಚ್ಚಿಗೆ ಇಟ್ಟುಕೊಳ್ಳುತ್ತಾರೋ ಅದು ಕಳ್ಳತನವಾಗುತ್ತದೆ. ಅಗತ್ಯಕ್ಕಿಂತ ಹೆಚ್ಚಿನ ಹಣವನ್ನು , ಆಸ್ತಿಯನ್ನು ಬುದ್ಧಿಯನ್ನು ಸ್ವಾರ್ಥಕ್ಕಾಗಿ, ಸಮಾಜದ ಶೋಷಣೆಗಾಗಿ ಬಳಸಿಕೊಳ್ಳುತ್ತಾರೆ. ಹೀಗಾಗಿ ಹೆಚ್ಚು ಆದಾಯ ಗಳಿಸುವವರಿಗೆ ಹೆಚ್ಚಿನ

---

*ಶಾಂತವೇರಿ ಗೋಪಾಲಗೌಡರ ನೆನಪಿನ ಸಂಪುಟ : ಸಂ. ಕಾಳೇಗೌಡ ನಾಗವಾರ, ಜಿ.ವಿ.ಆನಂದಮೂರ್ತಿ.

ತೆರಿಗೆಯನ್ನು ವಿಧಿಸಿ ನ್ಯಾಯಯುತ ತೆರಿಗೆ ಪದ್ಧತಿಯನ್ನು ರೂಪಿಸುವಂತೆ ಸರ್ಕಾರವನ್ನು ಒತ್ತಾಯಿಸಿದ್ದರು.

**7. ವಿಧಾನ ಪರಿಷತ್‌ನ ರದ್ದಾಯಿತಿ :**

ಶಾಸಕರಾಗಿ ಗೋಪಾಲಗೌಡರ ಇನ್ನೊಂದು ಹೋರಾಟ ಮತ್ತು ಪ್ರಯತ್ನವೆಂದರೆ ವಿಧಾನ ಪರಿಷತ್‌ನ ರದ್ದಾಯಿತಿ. ಪ್ರಜಾತಂತ್ರ ವ್ಯವಸ್ಥೆಯಲ್ಲಿ ಪ್ರಜಾಪ್ರತಿನಿಧಿಗಳಿರಬೇಕು ನಿಜ. ಕೇಂದ್ರದಲ್ಲಿ ಜನರನ್ನು ಪ್ರತಿನಿಧಿಸುವ ಲೋಕ ಸಭೆ, ಪ್ರಾಂತ್ಯಗಳನ್ನು ಪ್ರತಿನಿಧಿಸುವ ರಾಜ್ಯ ಸಭೆಗಳಿವೆ. ಇಂತಹ ಎರಡು ಸದನಗಳ ಒಂದು ಫೆಡರಲ್ ಸರ್ಕಾರಕ್ಕೆ ಅಗತ್ಯ. ಆದರೆ ಪ್ರಾಂತ್ಯಗಳಲ್ಲಿ ಜನತೆಯನ್ನು ಸಮರ್ಥವಾಗಿ ಪ್ರತಿನಿಧಿಸುವ ಪ್ರಜಾಪ್ರತಿನಿಧಿ ಸದನ ಇರುವಾಗ ಎರಡನೇ ಸದನವಾದ ವಿಧಾನ ಪರಿಷತ್ತಿನ ಅವಶ್ಯಕತೆ ಇರುವುದಿಲ್ಲ. ಇದು ಕೇವಲ ವೆಚ್ಚದ ವ್ಯವಸ್ಥೆ. ವಿಧಾನ ಪರಿಷತ್ತಿಗೆ ಯಾವುದೇ ವಿಶೇಷ ಅಧಿಕಾರವನ್ನು ಸಂವಿಧಾನ ನೀಡಿಲ್ಲ. ಹೀಗಾಗಿ ಕಾರ್ಯದಕ್ಷತೆಯನ್ನು ಅಲ್ಲಿಂದ ನಿರೀಕ್ಷಿಸಲಾಗುವುದಿಲ್ಲ. ಜೊತೆಗೆ ಪ್ರಜಾಪ್ರತಿನಿಧಿ ಸದನದ ಕಾರ್ಯಗಳಿಗೆ ಈ ಸದನ ಅಡ್ಡಿಪಡಿಸಬಹುದು. ಈ ಎಲ್ಲಾ ಕಾರಣಗಳಿಂದ ವಿಧಾನ ಪರಿಷತ್ತನ್ನು ರದ್ದುಗೊಳಿಸುವುದು ಸೂಕ್ತ ಎಂದು ಒತ್ತಾಯಿಸಿದ್ದರು. ಆದರೆ ಬಹುತೇಕ ರಾಜ್ಯಗಳಲ್ಲಿ ವಿಧಾನ ಪರಿಷತ್ತನ್ನು ರದ್ದುಗೊಳಿಸಿದ್ದರೂ ಕರ್ನಾಟಕದಲ್ಲಿ ಇದುವರೆವಿಗೂ ಅಸ್ತಿತ್ವದಲ್ಲಿದೆ.

**8. ಕನ್ನಡ ಭಾಷೆಯಲ್ಲಿ ನ್ಯಾಯ -ಮಿತ ವೆಚ್ಚದಲ್ಲಿ ನ್ಯಾಯ :**

ನ್ಯಾಯಾಲಯದ ತೀರ್ಪುಗಳು ಮಾತೃಭಾಷೆಯಾದ ಕನ್ನಡದಲ್ಲಿಯೇ ಇರಬೇಕು. ಏಕೆಂದರೆ ನ್ಯಾಯಾಲಯ ನೀಡಿದ ತೀರ್ಪುಗಳನ್ನು ಕಕ್ಷಿದಾರರು ಸರಳವಾಗಿ ಅರ್ಥಮಾಡಿಕೊಳ್ಳುತ್ತಾರೆ. ಜೊತೆಗೆ ವಕೀಲರು ಕನ್ನಡದಲ್ಲಿ ವಾದ ಮಾಡಿ, ಸಾಕ್ಷಿದಾರರು ಕನ್ನಡದಲ್ಲಿ ಮಾತನಾಡಿರುವುದನ್ನು ಇಂಗ್ಲಿಷ್‌ಗೆ ಭಾಷಾಂತರಿಸುವಾಗ ಬಹಳಷ್ಟು ತಪ್ಪುಗಳಾಗುವ ಸಾಧ್ಯತೆ ಇದೆ. ಈ ಕಾರಣದಿಂದ ನ್ಯಾಯಾಲಯಗಳು ಕನ್ನಡದಲ್ಲಿಯೇ ತೀರ್ಪು ನೀಡುವುದು ಸೂಕ್ತ ಎಂಬುವುದು ಇವರ ಬಲವಾದ ನಂಬಿಕೆಯಾಗಿತ್ತು.

ಗೋಪಾಲಗೌಡರು ಭಾರತದ ನ್ಯಾಯಾಂಗ ವ್ಯವಸ್ಥೆ ದುಬಾರಿಯಾಗಿದೆ. ಈ ರೀತಿಯ

ದುಬಾರಿ ನ್ಯಾಯಾಂಗ ವ್ಯವಸ್ಥೆಯಲ್ಲಿ ಸಾಮಾನ್ಯ ಜನತೆ ನ್ಯಾಯಾಲಯದ ಕಡೆ ತಿರುಗಿ ನೋಡದ ಪರಿಸ್ಥಿತಿ ನಿರ್ಮಾಣವಾಗಿದೆ. ಹೀಗಾಗಿ ಸಾಮಾನ್ಯ ಜನರು ತಮಗೆ ಅನ್ಯಾಯವಾಗುತ್ತಿದ್ದರೂ, ತಮ್ಮ ಹಕ್ಕಿನ ಹರಣವಾಗುತ್ತಿದ್ದರೂ ನ್ಯಾಯಾಲಯದಲ್ಲಿ ಪರಿಹಾರ ಕೇಳುವುದಕ್ಕಿಂತ ಇದನ್ನು ಸಹಿಸಿಕೊಂಡು ಬದುಕುತ್ತಿದ್ದಾರೆ. ಆದ್ದರಿಂದ ನ್ಯಾಯಾಲಯಗಳು ಅತ್ಯಂತ ಮಿತ ವೆಚ್ಚದಲ್ಲಿ ನ್ಯಾಯ ಒದಗಿಸುವ ವ್ಯವಸ್ಥೆಯನ್ನು ರೂಪಿಸಿಕೊಳ್ಳಬೇಕು. ಹಾಗೂ ಕಡುಬಡವರಿಗೆ ಉಚಿತ ನ್ಯಾಯವನ್ನು ಒದಗಿಸಿಕೊಡಬೇಕೆಂದು ಒತ್ತಾಯಿಸಿದರು. ಜೊತೆಗೆ ಸಾರ್ವಜನಿಕರ ಹಿತಾಸಕ್ತಿಗೆ, ಬಡಜನತೆಯ ಹಿತಾಸಕ್ತಿಗೆ ದಕ್ಕೆಯಾಗುವ ಯಾವುದೇ ಪ್ರಕರಣಗಳು ನ್ಯಾಯಾಲಯದ ಗಮನಕ್ಕೆ ಬಂದಾಗ ನ್ಯಾಯಾಲಯಗಳು ತಟಸ್ಥವಾಗಿರದೆ ಸ್ವತಃ ತಾನೇ ಭಾಗಿಯಾಗಿ ನ್ಯಾಯ ತೀರ್ಮಾನ ಮಾಡಬೇಕು. ಹೀಗಾದಾಗ ಮಾತ್ರ ಸಾಮಾನ್ಯ ಜನತೆ ಸ್ವತಂತ್ರವಾಗಿ ನಿರ್ಭಯವಾಗಿ ಬದುಕಲು ಸಾಧ್ಯ ಎಂಬ ವಾದವನ್ನು ಮುಂದಿಟ್ಟಿದ್ದರು.

ನ್ಯಾಯಾಲಯದ ತೀರ್ಪುಗಳು ದುಬಾರಿಯಾಗಲು ಕಾರಣವಾದ ವಿಳಂಬ ನೀತಿಯನ್ನು ತಪ್ಪಿಸಿ ಆದಷ್ಟು ಶೀಘ್ರ ನ್ಯಾಯ ನಿರ್ಣಯ ಕೊಡುವ ಪದ್ಧತಿಯನ್ನು ಜಾರಿಗೊಳಿಸಬೇಕು. ಜಸ್ಟೀಸ್ ಹೋಯ್ಸ್ ಅವರ ವಿಳಂಬವಾದ ನ್ಯಾಯ ನ್ಯಾಯವೇ ಅಲ್ಲ ಎಂಬ ಮಾತನ್ನು ಆಧಾರವಾಗಿಟ್ಟು ಕೊಂಡ ಗೋಪಾಲಗೌಡರು ವಿಳಂಬವಾದ ತೀರ್ಪುಗಳು ಬಹುತೇಕ ವೇಳೆ ಸೂಕ್ತ ನ್ಯಾಯ ಒದಗಿಸಲಾರದು. ಆದ್ದರಿಂದ ನ್ಯಾಯಾಂಗದ ದಕ್ಷತೆಯ ದೃಷ್ಟಿಯಿಂದ, ಜನತೆಯ ಹಿತದ ದೃಷ್ಟಿಯಿಂದ ಶೀಘ್ರವಾಗಿ ಪ್ರಕರಣಗಳ ಇತ್ಯರ್ಥವಾಗುವುದು ಸೂಕ್ತ. ಈ ನಿಟ್ಟಿನಲ್ಲಿ ಸರ್ಕಾರ ಮತ್ತು ನ್ಯಾಯಾಲಯಗಳು ಕಾರ್ಯೋನ್ಮುಖವಾಗಬೇಕೆಂದು ಒತ್ತಾಯಿಸಿದರು.

**ಆಡಳಿತ ಭಾಷೆಯಾಗಿ ಕನ್ನಡ :**

ಕನ್ನಡ ಆಡಳಿತ ಭಾಷೆಯಾಗಬೇಕು. ಕನ್ನಡ ಭಾಷೆಯನ್ನು ಉಳಿಸಿಕೊಳ್ಳುವ ದೃಷ್ಟಿಯಿಂದ ಕನ್ನಡಭಾಷೆಯನ್ನು ಅಭಿವೃದ್ಧಿಪಡಿಸುವ ದೃಷ್ಟಿಯಿಂದ, ಸಾಮಾನ್ಯ ಜನತೆ ಆಡಳಿತವನ್ನು ಅರ್ಥ ಮಾಡಿಕೊಳ್ಳುವ ದೃಷ್ಟಿಯಿಂದ ಕಡ್ಡಾಯವಾಗಿ ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಮಾಡಬೇಕು. ಪ್ರಾಥಮಿಕ, ಮಾಧ್ಯಮಿಕ, ಕಾಲೇಜು ಮತ್ತು ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡದಲ್ಲಿಯೇ ಬೋಧಿ

ಸಬೇಕು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಟೈಪಿಂಗ್‌ನಲ್ಲಿ ಕನ್ನಡವನ್ನೇ ಹೆಚ್ಚು ಬಳಸಬೇಕು. ಜೊತೆಗೆ ಯಾವುದೇ ತಾಂತ್ರಿಕ ವಿಷಯಗಳಲ್ಲಿಯೂ ಕನ್ನಡವನ್ನು ಬಳಸುವಂತಾಗ ಬೇಕು. ಈ ನಿಟ್ಟಿನಲ್ಲಿ ಸರ್ಕಾರ ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಬಳಸುವುದೇ ಅಲ್ಲದೆ ಅದರ ಬೆಳವಣಿಗೆಗೆ ಪ್ರೋತ್ಸಾಹವನ್ನು ನೀಡಬೇಕೆಂದು ಒತ್ತಾಯಿಸಿದರು.

**ಬ್ಯಾಂಕುಗಳ ರಾಷ್ಟ್ರೀಕರಣ :**

ಕೆಳವರ್ಗದ ಸಾಮಾನ್ಯ ಜನತೆ ಬ್ಯಾಂಕಿಂಗ್ ಸೇವೆಯಿಂದ ವಂಚಿತರಾಗಿದ್ದಾರೆ. ಈಗಿರುವ ಬ್ಯಾಂಕುಗಳು ಕಷ್ಟದಲ್ಲಿರುವ ಬಡತನದಲ್ಲಿರುವ ಸಾಮಾನ್ಯ ಜನತೆಗೆ ಯಾವುದೇ ನೆರವನ್ನು ನೀಡುತ್ತಿಲ್ಲ. ಹೀಗಾಗಿ ಬ್ಯಾಂಕುಗಳ ರಾಷ್ಟ್ರೀಕರಣವಾಗಬೇಕು. ಆಗ ಮಾತ್ರ ಸಂಕಷ್ಟದಲ್ಲಿರುವ ರೈತರು, ಕಾರ್ಮಿಕರು, ನಿಜವಾಗಿ ದುಡಿಮೆ ಮಾಡುವವರು ಹಣಕಾಸಿನ ನೆರವನ್ನು ಪಡೆದು ತಮ್ಮ ಜೀವನ ಮಟ್ಟವನ್ನು ಸುಧಾರಿಸಿಕೊಳ್ಳುತ್ತಾರೆ. ಸಮಾಜವಾದ ಬರುವುದಾದರೆ, ದೇಶ ಅಭಿವೃದ್ಧಿಯಾಗುವುದಾದರೆ, ಅದು ಕಷ್ಟಪಟ್ಟು ದುಡಿಯುವ ರೈತರಿಂದ, ಕಾರ್ಖಾನೆಗಳಲ್ಲಿ ದುಡಿಯುವ ಕಾರ್ಮಿಕರಿಂದ ಮಾತ್ರ ಸಾಧ್ಯ. ಟಾಟಾ, ಬಿರ್ಲಾ, ಚಟ್ಟಿಯಾರರ ನೆರವನ್ನು ತೆಗೆದುಕೊಂಡು ಅವರ ನೆರವಿನಿಂದ ದೇಶದಲ್ಲಿ ಸಮಾನತೆ ತರುತ್ತೇವೆ. ಸಮಾಜವಾದವನ್ನು ತರುತ್ತೇವೆ. ಸುಭಿಕ್ಷೆಯನ್ನು ತರುತ್ತೇವೆ ಎಂಬ ಸರ್ಕಾರದ ಧೋರಣೆಯನ್ನು ಕಟುವಾಗಿ ಟೀಕಿಸಿದರು. ಅಲ್ಲದೆ ನಿಜವಾದ ದುಡಿಮೆ ಮಾಡುವವರ ಉದ್ಧಾರ ಆಗಬೇಕು. ಸಮಾಜವಾದ ಅಸ್ತಿತ್ವಕ್ಕೆ ಬರಬೇಕು. ಆ ಮೂಲಕ ದೇಶದ ಅಭಿವೃದ್ಧಿಯಾಗಬೇಕು ಎಂದರೆ ಬ್ಯಾಂಕುಗಳ ರಾಷ್ಟ್ರೀಕರಣ ಆಗಬೇಕೆಂದು ಸರ್ಕಾರವನ್ನು ಒತ್ತಾಯಿಸಿದರು.

**ಸಮಾನ ವೇತನ :**

ಇಡೀ ದೇಶದಾದ್ಯಂತ ವೇತನದಲ್ಲಿರುವ ಅಂತರವನ್ನು ಮನಗಂಡ ಗೋಪಾಲಗೌಡರು ಪ್ರತಿ ಸರ್ಕಾರಗಳು ಸಮಾನ ಕೆಲಸಕ್ಕೆ ಸಮಾನ ವೇತನ ನೀಡುವ ವ್ಯವಸ್ಥೆಯನ್ನು ಜಾರಿಗೊಳಿಸ ಬೇಕೆಂದು ಒತ್ತಾಯಿಸಿದರು. ಸರ್ಕಾರಿ ಕಾರ್ಯ ನಿರ್ವಹಿಸುತ್ತಿರುವ ಉನ್ನತಾಧಿಕಾರಿಗಳು ಮತ್ತು ಅಧೀನಾಧಿಕಾರಿಗಳ ನಡುವೆ ಇರುವ ವೇತನದ ಅಂತರ ಬಹಳ ಇದೆ. ಈಗ ಸರ್ಕಾರದ

ವೇತನದ ಅಂತರ 200 ಪಟ್ಟು ಇದೆ. ಅದನ್ನು 10 ಪಟ್ಟು ಅಂತರಕ್ಕೆ ಇಳಿಸಬೇಕು ಎಂಬ ವಾದವನ್ನು ಮಂಡಿಸಿದರು. ಜೊತೆಗೆ ಸರ್ಕಾರ ಕೆಲಸಕ್ಕೆ ಸೂಕ್ತ ವಾತಾವರಣವನ್ನು ಕಲ್ಪಿಸಿಕೊಡಬೇಕು. ಕೆಲಸಕ್ಕೆ ಸೂಕ್ತ ವೇತನ ನೀಡಿ ಮಾದರಿ ದಣಿಯಂತೆ ವರ್ತಿಸಿದಾಗ ಸಮಾಜದ ಜನರು ಈ ನಿಟ್ಟಿನಲ್ಲಿ ಕಾರ್ಯೋನ್ಮುಖರಾಗುತ್ತಾರೆ ಎಂಬ ವಿಷಯವನ್ನು ಪ್ರಸ್ತಾಪಿಸಿದರು.

**ಅಧಿಕಾರದ ವಿಕೇಂದ್ರೀಕರಣ :**

ಅಧಿಕಾರದ ವಿಕೇಂದ್ರೀಕರಣವಾದಾಗ ಮಾತ್ರ ನಿಜವಾದ ಪ್ರಜಾಸತ್ತಾತ್ಮಕ ಪದ್ಧತಿ ಅಸ್ತಿತ್ವದಲ್ಲಿರಲು ಸಾಧ್ಯ. ಆದರೆ ಕೇಂದ್ರ ಸರ್ಕಾರ ಭದ್ರತೆಯ ಹೆಸರಿನಲ್ಲಿ , ಏಕತೆಯ ಹೆಸರಿನಲ್ಲಿ ದಿನೇ ದಿನೇ ಅಧಿಕಾರವನ್ನು ಕೇಂದ್ರೀಕರಣಗೊಳಿಸಿಕೊಳ್ಳುತ್ತಿದೆ. ಈ ರೀತಿಯ ಕೇಂದ್ರೀಕರಣ ಪ್ರಜಾಸತ್ತಾತ್ಮಕ ತತ್ವವನ್ನು ಅಲ್ಲಗಲೆಯುತ್ತದೆ. ದೇಶದ ಶಕ್ತಿಯನ್ನು ಕ್ಷೀಣಿಸುತ್ತದೆ ಎಂಬ ವಾದವನ್ನು ಮುಂದಿಟ್ಟು ಜೊತೆಗೆ ಸಂಪತ್ತಿನ ಮತ್ತು ಪ್ರಜಾಸತ್ತೆಯ ವಿಕೇಂದ್ರೀಕರಣವಾದಾಗ ಮಾತ್ರ ಪ್ರಾಂತ್ಯಗಳ ಜೊತೆಗೆ ದೇಶದ ಅಭಿವೃದ್ಧಿ ಸಾಧ್ಯ. ಆಗ ಮಾತ್ರ ಜನತೆ ಸರ್ಕಾರದಲ್ಲಿ ಹೆಚ್ಚು ಭರವಸೆಯನ್ನು , ನಂಬಿಕೆಯನ್ನು ಇಟ್ಟು ಸಹಕರಿಸುತ್ತಾರೆ. ಆದ್ದರಿಂದ ಪ್ರಜಾಸತ್ತಾತ್ಮಕ ವಿಕೇಂದ್ರೀಕರಣ ತೀರಾ ಅಗತ್ಯ ಎಂಬುದನ್ನು ಒತ್ತಿ ಹೇಳಿದ್ದಾರೆ.

**ಜೈಲು ಸುಧಾರಣೆ :**

ಜೈಲು ವ್ಯವಸ್ಥೆಯ ಸುಧಾರಣೆಯಾಗಬೇಕೆಂದು ಸರ್ಕಾರದಲ್ಲಿ ಒತ್ತಡವನ್ನು ತರುವ ಸಂದರ್ಭದಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಕಾಂಗ್ರೆಸ್ ಪಕ್ಷ ಬ್ರಿಟೀಷರ ಆಡಳಿತದ ಕಾಲದಲ್ಲಿ ಜೈಲು ಸುಧಾರಣೆಯಾಗಬೇಕೆಂದು ಬ್ರಿಟೀಷ್ ಸರ್ಕಾರದ ಮೇಲೆ ನಿರಂತರ ಒತ್ತಡವನ್ನು ತರುತ್ತಿತ್ತು. ಆದರೆ ಈಗ ಅದೇ ಪಕ್ಷದ ಸರ್ಕಾರ ಅಧಿಕಾರದಲ್ಲಿದ್ದು ಜೈಲಿನಲ್ಲಿರುವವರನ್ನು ಅತ್ಯಂತ ಕ್ರೂರವಾಗಿ , ಕೀಳಾಗಿ ನಡೆಸಿಕೊಳ್ಳುತ್ತಿದೆ. ಈ ವರ್ತನೆ ಬದಲಾಗಬೇಕು. ಜೈಲಿನ ಶುಚಿತ್ವವನ್ನು ಕಾಪಾಡಬೇಕು. ಜೈಲಿನಲ್ಲಿರುವವರಿಗೆ ಆಹಾರವನ್ನು ಉತ್ತಮ ರೀತಿಯಲ್ಲಿ ಕೊಡಬೇಕು. ಅಲ್ಲಿ ನೀಡುವ ಸೋಪು, ಬಟ್ಟೆ ಇತರ ವಸ್ತುಗಳನ್ನು ಜೈಲು ಸಿಬ್ಬಂದಿಗಳು ಮನೆಗೆ ಸಾಗಿಸುತ್ತಿದ್ದಾರೆ. ಇದು ನಿಲ್ಲಬೇಕು. ವಿಭಿನ್ನ ಹೋರಾಟಗಳಲ್ಲಿ ತೊಡಗಿದ ದೇಶ ಪ್ರೇಮಿಗಳು

ಬೇರೆ ಬೇರೆ ಸಂದರ್ಭಗಳಲ್ಲಿ ಜೈಲು ಸೇರಿರುತ್ತಾರೆ ಅಂತಹವರನ್ನು ತುಚ್ಛವಾಗಿ ಕಾಣುವುದು ಸರಿಯಲ್ಲ. ಜೈಲಿನಲ್ಲಿರುವವರೆಲ್ಲರೂ ಅಪರಾಧಿಗಳಾಗಿರುವುದಿಲ್ಲ. ಆದ್ದರಿಂದ ಅವರಿಗೆ ಸೂಕ್ತ ಸೌಕರ್ಯಗಳನ್ನು ಒದಗಿಸಬೇಕು ಎಂಬ ಅಂಶವನ್ನು ಸರ್ಕಾರದ ಗಮನಕ್ಕೆ ತಂದು ಪರಿಹಾರ ಒದಗಿಸುವ ಪ್ರಯತ್ನ ಮಾಡಿದ್ದಾರೆ.

ಕರ್ನಾಟಕ ಸರ್ಕಾರದ ಸಂಸ್ಕೃತಿ ಪ್ರಸಾರಕ್ಕೆ ಹೊರಟಾಗ ಅದನ್ನು ಗೋಪಾಲಗೌಡರು ಟೀಕಿಸಿ ಕರ್ನಾಟಕದ ಜನತೆ ಅನ್ನ, ಆಹಾರ, ವಸತಿ ಒದಗಿಸಿಕೊಡಿ ಎಂದು ಪರಿತಪಿಸುವಾಗ ನಾವು ಸಂಸ್ಕೃತಿ ಪ್ರಸಾರಕ್ಕೆ ಹೊರಟಿರುವುದು ವಿಕಟ ಅಟ್ಟಹಾಸವಲ್ಲದೆ ಬೇರೇನು ? ಎಂದು ಕೇಳುತ್ತಾ ರೋಂ ದೇಶಕ್ಕೆ ಸಂಬಂಧಿಸಿದ ಒಂದು ಗಾದೆ ಮಾತನ್ನು ನೆನಪಿಸಿಕೊಳ್ಳುತ್ತಾರೆ. ''ರೋಂ ದೇಶ ಹೊತ್ತಿ ಉರಿಯುತ್ತಿರುವಾಗ ನಿರೋ ದೊರೆ ಪಿಟೀಲು ಬಾರಿಸುತ್ತಿದ್ದನಂತೆ '' ಹೀಗಾಯಿತು ನಮ್ಮ ಸಂಸ್ಕೃತಿ ಪ್ರಸಾರ ಎಂದು ಟೀಕಿಸುವುದರ ಮೂಲಕ ಸರ್ಕಾರ ಯಾವ ವಿಷಯಗಳಿಗೆ ಮೊದಲು ಆದ್ಯತೆ ನೀಡಬೇಕು. ನಂತರದ ಆದ್ಯತೆಗಳನ್ನು ಯಾವುದಕ್ಕೆ ನೀಡಬೇಕೆಂಬುದನ್ನು ತಿಳಿಸಿಕೊಡುವ ಮೂಲಕ ತಮ್ಮ ಹಿಂದುಳಿದ ಬಡವರ ಪರವಾದ ಪ್ರಾಮಾಣಿಕ ಕಳಕಳಿಯನ್ನು ವ್ಯಕ್ತಪಡಿಸಿದರು.

ಹೀಗೆ ಈ ಪ್ರಯತ್ನಗಳೇ ಅಲ್ಲದೆ ಜಾತಿ ಮತ್ತು ವರ್ಗರಹಿತ ಸಮಾಜದ ಸ್ಥಾಪನೆಗೆ ಸರ್ಕಾರದ ಒತ್ತಡವನ್ನು ತರುವ ಪ್ರಸ್ತಾಪವನ್ನು ಮಂಡಿಸಿದ್ದರು. ಅಲ್ಲದೆ ಸಾರಿಗೆ ಸಂಪರ್ಕದ ರಾಷ್ಟ್ರೀಕರಣ, ಮಲೆನಾಡಿನ ವಿಶಿಷ್ಟ ಸಮಸ್ಯೆಗಳ ಪರಿಹಾರಕ್ಕೆ ಒತ್ತಾಯ, ಕೃಷಿಯನ್ನಾಧರಿಸಿದ ಕೈಗಾರಿಕೆಗಳ ಸ್ಥಾಪನೆಗೆ ಒತ್ತಾಯ, ಸಮಾಜದಲ್ಲಿ ಧಾರ್ಮಿಕ ಸಂಸ್ಥೆಗಳ ಸ್ವರೂಪದ ಬದಲಾವಣೆ, ಬರಗಾಲ ಅಥವಾ ಪ್ರಕೃತಿ ವಿಕೋಪಗಳಿಗೆ ಸೂಕ್ತ ಪರಿಹಾರ , ನೀರಾವರಿ ವ್ಯವಸ್ಥೆಯ ಸುಧಾರಣೆ ಇಂತಹ ಹಲವಾರು ಪ್ರಸ್ತಾವಗಳನ್ನು ಸದನದಲ್ಲಿ ಮಂಡಿಸಿ ಅವುಗಳನ್ನು ಅಂಗೀಕರಿಸಿ ಅನುಷ್ಠಾನ ಗೊಳಿಸುವ ಪ್ರಯತ್ನವನ್ನು ನಿರಂತರವಾಗಿ ಮಾಡಿದ್ದಾರೆ. ಗೋಪಾಲಗೌಡರು ಶಾಸಕರಾಗಿ ಸದನದ ಒಳಗೆ ಯಾವ ರೀತಿಯ ಪ್ರಯತ್ನಗಳನ್ನು ಮಾಡಿದ್ದಾರೋ ಹಾಗೆ ಸದನದ ಹೊರಗೂ ದಿನನಿತ್ಯದ ಬದುಕಿನಲ್ಲಿ ತುಳಿತಕ್ಕೊಳಗಾದವರ, ದಲಿತರ, ಶೋಷಿತರ ಜೊತೆಯಲ್ಲಿದ್ದು ಅವರ ಸಮಸ್ಯೆಗಳಿಗೆ

ಸೂಕ್ತ ಪರಿಹಾರ  ದೊರಕಿಸಿಕೊಡುವ ಪ್ರಯತ್ನ ಮಾಡಿದ್ದಾರೆ. ಅವರು ತೀರ್ಥಹಳ್ಳಿ ಕ್ಷೇತ್ರದ ಶಾಸಕರಾಗಿ ಈ ಭಾಗದ ನಿರ್ದಿಷ್ಟ ಸಮಸ್ಯೆಗಳ ಪರಿಹಾರಕ್ಕೆ ಶ್ರಮಿಸಿದ್ದರಲ್ಲದೇ, ಯಾವ ವರ್ಗ, ಜಾತಿ, ಪ್ರದೇಶ ಎಂಬ ಭಾವನೆ ವ್ಯಕ್ತಪಡಿಸದೆ ನಾಡಿನ ಯಾವುದೇ ಭಾಗದಲ್ಲಿ ಅನ್ಯಾಯ ಅಥವಾ ಕಷ್ಟಕ್ಕೊಳಗಾದ ಜನತೆಯ ಪರವಾಗಿ ಹೋರಾಟ ಮಾಡಿ ಅದರ ಪರಿಹಾರಕ್ಕೆ ಅವಿರತ ಪ್ರಯತ್ನ ಮಾಡಿದ್ದಾರೆ. ಒಟ್ಟಿನಲ್ಲಿ ಇವರ ಎಲ್ಲಾ ಪ್ರಯತ್ನಗಳೂ ಸಮಾಜವಾದಿ ಸಮಾಜದ ನಿರ್ಮಾಣಕ್ಕೆ ಪೂರಕವಾಗಿದ್ದು , ದುರ್ಬಲ ವರ್ಗದವರ ಅಭಿವೃದ್ಧಿಗಾಗಿ ಹೋರಾಡಿದರು. ಈ ಸಂದರ್ಭದಲ್ಲಿ ಒಂದು ನಿರ್ದಿಷ್ಟ ತಾತ್ವಿಕ  ನೆಲೆಗಟ್ಟಿನ ಮೇಲೆ ರಾಜ್ಯ ವ್ಯವಸ್ಥೆಯನ್ನು ಕಟ್ಟಬೇಕು. ಅದಕ್ಕಾಗಿ ಸರ್ಕಾರ ಮತ್ತು ಜನ ಪರಸ್ಪರ ಸಹಕರಿಸಿ ಕಾರ್ಯನಿರ್ವಹಿಸಬೇಕು ಎಂಬ ನಿಲುವನ್ನು ಹೊಂದಿದ್ದರು.

## ಅಧ್ಯಾಯ -8

# ಮಲೆನಾಡಿನಲ್ಲಿ ಗೋಪಾಲಗೌಡರ ಸಮಾಜವಾದಿ ಹೋರಾಟದ ಪ್ರಭಾವ

ಗೋಪಾಲಗೌಡರು ಹುಟ್ಟು ಸಮಾಜವಾದಿಯಾಗಿದ್ದರು. ದೇಶದ ಬೇರೆ ಬೇರೆ ಭಾಗಗಳಲ್ಲಿ ಸಮಾಜವಾದಿ ಚಿಂತಕರು, ಹೋರಾಟಗಾರರು ಇದ್ದರೂ ಮಲೆನಾಡಿನ ಭಾಗದಲ್ಲಿ ಸಮಾಜವಾದವನ್ನು ಬೆಳೆಸಿದ ಪ್ರಥಮ ವ್ಯಕ್ತಿ ಎಂದರೆ ಗೋಪಾಲಗೌಡರು. ಇವರು ಮೊದಲಿನಿಂದಲೂ ಸಮಾಜವಾದಿ ಮನೋಭಾವನೆ ಹೊಂದಿದ್ದರೂ ಸ್ವಾತಂತ್ರ್ಯ ಪೂರ್ವದಲ್ಲಿ ಕಾಂಗ್ರೆಸ್ ಪಕ್ಷದ ಕಾರ್ಯಕರ್ತರಾಗಿ ಹಲವು ಚಳುವಳಿಗಳಲ್ಲಿ ಭಾಗವಹಿಸಿದ್ದರು. 1948 ರ ನಂತರ ಸಮಾಜವಾದಿ ಪಕ್ಷದ ನಿಷ್ಠಾವಂತ ಕಾರ್ಯಕರ್ತರಾಗಿ ದುಡಿದರು. ಅಲ್ಲದೆ ಕರ್ನಾಟಕ ರಾಜ್ಯದ ಸಮಾಜವಾದಿ ನಾಯಕರಾಗಿ ಕಾರ್ಯನಿರ್ವಹಿಸಿದರು. ಇವರು ಸಮಾಜವಾದಿ ತತ್ವನ್ನಾಧರಿಸಿ ಮಾಡಿದ ಮೊದಲ ಹೋರಾಟ ಎಂದರೆ 'ಕಾಗೋಡು ರೈತ ಹೋರಾಟ ' - ಈ ಚಳುವಳಿಯಲ್ಲಿ ಭಾಗವಹಿಸಿ, ಅದರ ನೇತೃತ್ವ ವಹಿಸಿ, ಚಳುವಳಿಗೆ ಹೊಸ ಚೈತನ್ಯ ತಂದುಕೊಡುವುದರ ಮೂಲಕ ಅದರ ಸಫಲತೆಗೆ ಕಾರಣರಾದರು. ಈ ಚಳುವಳಿಯೇ ಇವರನ್ನು ಮಲೆನಾಡಿನ ಭಾಗದ ಪ್ರಶ್ನಾತೀತ ಸಮಾಜವಾದಿ ನಾಯಕರನ್ನಾಗಿ ರೂಪಿಸಿತಲ್ಲದೆ, ಈ ಭಾಗದ ರೈತರ, ಕೂಲಿ ಕಾರ್ಮಿಕರ, ದೀನ ದಲಿತರ ಜನಮನದಲ್ಲಿ ಗೋಪಾಲಗೌಡರು ಚಿರಾಯು ಆದರು.

ಗೋಪಾಲಗೌಡರು ಕೇವಲ ಮಲೆನಾಡು ಭಾಗದಲ್ಲಿ ಮಾತ್ರ ತಮ್ಮ ಸಮಾಜವಾದಿ ಚಳುವಳಿ, ಕಾರ್ಯಕ್ರಮಗಳನ್ನು ಸೀಮಿತಗೊಳಿಸಿಕೊಂಡಿರಲಿಲ್ಲ. ಗೋವಾ ವಿಮೋಚನೆಯಂತಹ ಹಲವಾರು ಹೋರಾಟಗಳಲ್ಲಿ ಭಾಗವಹಿಸಿ ಭಾರತದಾದ್ಯಂತ ಚಿರಪರಿಚಿತರಾದ ರಾಷ್ಟ್ರ ಮಟ್ಟದ ಸಮಾಜವಾದಿ ನಾಯಕರಲ್ಲಿ ಇವರೂ ಒಬ್ಬರಾಗಿದ್ದರು. ಆದರೆ ಇವರು ಕರ್ನಾಟಕ ರಾಜ್ಯದ ಅದರಲ್ಲಿಯೂ  ಕನ್ನಡ ನಾಡಿನ ಮಲೆನಾಡಿನ ಭಾಗದ ಜನತೆಯ ಮೇಲೆ ಗಾಢ ಪ್ರಭಾವ ಬೀರಿದ್ದಾರೆ. ಇವರು ಕರ್ನಾಟಕದ ಮಂಡ್ಯ, ಮೈಸೂರು, ಧಾರವಾಡ, ಗುಲ್ಬರ್ಗ ಮೊದಲಾದ ಕಡೆಗಳಲ್ಲಿ ನಡೆದ ರೈತರ ಪರವಾದ ಹೋರಾಟಗಳಲ್ಲಿ ಭಾಗವಹಿಸಿ ಅದರ ಯಶಸ್ಸಿಗೆ ಕಾರಣರಾದರು. ಅಲ್ಲದೆ ಕರ್ನಾಟಕದ ಯಾವುದೇ ಮೂಲೆಯಲ್ಲಿ ದಲಿತರ ಮೇಲಿನ ದೌರ್ಜನ್ಯ ಪ್ರಕರಣಗಳಿರಬಹುದು. ಅತ್ಯಾಚಾರ ಅಥವಾ ಶೋಷಣೆ ನಡೆಯುತ್ತಿದೆ ಎಂದರೆ ತಕ್ಷಣ ಅಲ್ಲಿಗೆ

ಧಾವಿಸಿ ಅವರ ಸಮಸ್ಯೆಗಳಿಗೆ ಸ್ಪಂದಿಸಿ ಸರ್ಕಾರದ ಗಮನ ಸೆಳೆಯುವ ಮತ್ತು ಸೂಕ್ತ ಪರಿಹಾರ ಒದಗಿಸುವಂತೆ ಒತ್ತಾಯಿಸುತ್ತಿದ್ದರು. ಕರ್ನಾಟಕದ ಏಕೀಕರಣ, ಆಡಳಿತ ಭಾಷೆಯಾಗಿ ಕನ್ನಡ, ನ್ಯಾಯಾಲಯದಲ್ಲಿ ಉಚಿತ ಮತ್ತು ಶೀಘ್ರ ನ್ಯಾಯ, ಗಡಿ ಸಮಸ್ಯೆಯಂತಹ ಹಲವರು ಸಮಸ್ಯೆಗಳ ನಿವಾರಣೆಗೆ ನಿರಂತರ ಶ್ರಮಿಸಿದ್ದರಲ್ಲದೆ, ಕನ್ನಡ ನಾಡು -ನುಡಿಯ ಬಗ್ಗೆ ಅಪಾರ ಪ್ರೀತಿ - ಗೌರವವನ್ನು ಹೊಂದಿದ್ದರು. ಆದರೂ ಇವರು ಮಲೆನಾಡಿನ ಭಾಗದ ವಿಶಿಷ್ಟ ಸಮಸ್ಯೆಗಳಿಗೆ ಸ್ಪಂದಿಸಿದ ರೀತಿ, ಜನರ ನಡುವೆ ಇದ್ದು ಯಾವುದೇ ಅನ್ಯಾಯದ ವಿರುದ್ಧ ಹೋರಾಡಿದ ಸಂದರ್ಭಗಳು ಮಲೆನಾಡಿನ ಜನರ ನಡುವಿನ ಸಹಜೀವನ ಅವರ ಮಾತಿನ ಮೋಡಿ, ಅವರ ಬುದ್ಧಿವಂತಿಕೆ, ಜ್ಞಾನದಾಹ ಇವುಗಳೆಲ್ಲವೂ ಇಲ್ಲಿನ ಜನರ ಮನಸ್ಸಿನ ಮತ್ತು ನಡೆ -ನುಡಿಯ ಮೇಲೆ ಅಗಾಧ ಪ್ರಭಾವವನ್ನು ಬೀರಿವೆ.

ಗೋಪಾಲಗೌಡರು ಮಲೆನಾಡಿನಲ್ಲಿಯೇ ಹುಟ್ಟಿ, ಮಲೆನಾಡಿನಲ್ಲಿಯೇ ಬೆಳೆದು, ಮಲೆನಾಡಿನಲ್ಲಿಯೇ ಸಾರ್ವಜನಿಕ ಜೀವನವನ್ನು ಆರಂಭಿಸಿದವರು. ಇವರ ಜೀವನ ಮತ್ತು ಕಾರ್ಯಚಟುವಟಿಕೆಗಳು ತಾವು ಬದುಕಿದ್ದ ಕಾಲದಲ್ಲಿನ ಜನರ ಮೇಲೆ ನೇರ ಪ್ರಭಾವವನ್ನು ಬೀರಿರುವುದೇ ಅಲ್ಲದೆ, ಇಂದಿಗೂ ಅವರ ಜೀವನ ಶೈಲಿ, ಅವರ ಚಿಂತನೆಗಳು, ಅವರು ರೂಪಿಸುತ್ತಿದ್ದ ಚಳುವಳಿ ಮತ್ತು ಕಾರ್ಯಕ್ರಮಗಳ ವೈಖರಿ ಇವುಗಳ ಪ್ರಭಾವವನ್ನು ಮಲೆನಾಡಿನ ಭಾಗದಲ್ಲಿ ನೋಡಬಹುದು. ತಾನು ವಿದ್ಯಾರ್ಥಿಯಾಗಿದ್ದಾಗಲೇ ತಮ್ಮ ಗುರುಗಳ ಮೇಲೆ ಹೇಗೆ ಪ್ರಭಾವ ಬೀರಿದ್ದರು ಎಂಬುವುದನ್ನು ಅವರ ಗುರುಗಳಾದ ಕಮಕೋಡು ನರಸಿಂಹ ಶಾಸ್ತ್ರಿಗಳು ಹೀಗೆ ಹೇಳಿಕೊಂಡಿದ್ದಾರೆ. 'ಭಾರತ ಬಿಟ್ಟು ತೊಲಗಿ' ಚಳುವಳಿಯ ಸಂದರ್ಭದಲ್ಲಿ ಉಪಾಧ್ಯಾಯರುಗಳು ತಂತಮ್ಮ ಶಾಲೆಗಳನ್ನು ರಾಷ್ಟ್ರೀಕರಿಸಬೇಕು, ಇಲ್ಲ ಎಂದರೆ ಬಹಿಷ್ಕರಿಸಬೇಕು. ಉಪಾಧ್ಯಾಯರುಗಳು ಹಿಂಜರಿಯವುದಾದರೆ ವಿದ್ಯಾರ್ಥಿಗಳೇ ಶಾಲೆ ಬಿಟ್ಟು ಹೊರ ಬರಬೇಕು ಎಂದು ಸವಾಲು ಹಾಕಿರುವುದು ಗುರುಗಳಿಗೆ ತದನಂತರದ ದಿನಗಳಲ್ಲಿ ಅದರರ್ಥ ಅರಿವಾದಾಗ ಆತನ ಸವಾಲಿನ ನೀತಿಯೇ ತನಗೆ ಪಾಠ ಕಲಿಸಿತು ಎಂದು ಹೇಳಿಕೊಂಡಿದ್ದಾರೆ. ಅಂದರೆ ಇವರ ಅನ್ಯಾಯದ ವಿರುದ್ಧದ ಚಿಂತನೆಗಳು ಮತ್ತು ಹೋರಾಟಗಳು ಹೈಸ್ಕೂಲು ಮತ್ತು ಕಾಲೇಜು ಗುರುಗಳ ಮೇಲೆ ಪ್ರಭಾವ ಬೀರಿರುವುದನ್ನು ನೋಡಬಹುದು.

ಗೋಪಾಲಗೌಡರು ಮಲೆನಾಡಿನ ಜನಮನದಲ್ಲಿ ಉಳಿದುಕೊಳ್ಳಲು ಕಾರಣವಾದ ಪ್ರಮುಖ ಘಟನೆ ಎಂದರೆ 'ಕಾಗೋಡು ಸತ್ಯಾಗ್ರಹ '. ಈ ಸತ್ಯಾಗ್ರಹ ರೈತ ಸಂಘದ ನೇತೃತ್ವದಲ್ಲಿ ನಡೆದರೂ, ಆ ಚಳುವಳಿ ಕ್ಷೀಣಿಸುವ ಸಂದರ್ಭದಲ್ಲಿ ಅದಕ್ಕೊಂದು ಹೊಸ ಆಯಾಮವನ್ನು ನೀಡಿ ರೈತರಲ್ಲಿ ಹೊಸ ಹುರುಪು, ಉತ್ಸಾಹವನ್ನು ತುಂಬಿ ರೈತರನ್ನು ಚಳುವಳಿಗೆ ಆಕರ್ಷಿಸಿದರು. ಅವರು ರೈತರ ಜೊತೆಯಲ್ಲಿಯೇ ಇದ್ದು ಹೋರಾಡಿದ ರೀತಿ, ರೈತರ ಉತ್ಸಾಹವನ್ನು ಕೆರಳಿಸುವ ವಿಧಾನ, ಜಮೀನ್ದಾರರ ಕ್ರೂರ ನಡುವಳಿಕೆಯನ್ನು ಹತ್ತಿಕ್ಕುವಲ್ಲಿ ರೂಪಿಸಿದ ತಂತ್ರಗಳು ರೈತ ಸಮುದಾಯವನ್ನು ಚಕಿತಗೊಳಿಸುವಂತಿತ್ತು. ಅಲ್ಲದೆ ಈ ರೈತ ಹೋರಾಟದ ಪ್ರಭಾವ ರಾಜ್ಯ ಮತ್ತು ರಾಷ್ಟ್ರ ಮಟ್ಟಕ್ಕೆ ವ್ಯಾಪಿಸಲು ತೆಗೆದುಕೊಂಡ ಕ್ರಮಗಳು ಇವರನ್ನು ಜನನಾಯಕರನ್ನಾಗಿ ರೂಪಿಸಿತು ಹಾಗೂ ಅವರ ವ್ಯಕ್ತಿತ್ವ ಮಲೆನಾಡಿನ ರೈತರ ಮನದಾಳದಲ್ಲಿ ಉಳಿದುಕೊಳ್ಳಲು ಕಾರಣವಾಯಿತು.

ಗೋಪಾಲಗೌಡರು ಕಾಗೋಡು ಸತ್ಯಾಗ್ರಹದ ಮೂಲಕ 'ಉಳುವವನೇ ಹೊಲದೊಡೆಯ' ಎಂಬ ಘೋಷಣೆಯನ್ನು ರಾಜ್ಯ - ರಾಷ್ಟ್ರ ಮಟ್ಟದಲ್ಲಿ ಪ್ರಚಾರಗೊಳಿಸಿದರಲ್ಲದೆ, ಕರ್ನಾಟಕ ಸರ್ಕಾರ ಭೂಸುಧಾರಣಾ ಕಾಯಿದೆಯನ್ನು ರೂಪಿಸುವಂತೆ ಒತ್ತಡ ತಂದು ಭೂಸುಧಾರಣಾ ಕಾಯಿದೆಯು ರೈತರ ಪರವಾಗಿ ರಚನೆಯಾಗುವಂತೆ ನಿರಂತರ ಪ್ರಯತ್ನ ಮಾಡಿದ್ದಾರೆ. ಇವರ ನಿರಂತರ ಪರಿಶ್ರಮ ಪ್ರಯತ್ನದಿಂದ ಮಲೆನಾಡಿನ ಭಾಗದಲ್ಲಿ ಭೂಸುಧಾರಣಾ ಕಾಯಿದೆ ವ್ಯಾಪಕವಾಗಿ ಮತ್ತು ಯಶಸ್ವಿಯಾಗಿ ಜಾರಿಗೊಳ್ಳಲು ಸಾಧ್ಯವಾಯಿತು. ಗೇಣಿ ರೈತರಲ್ಲಿ ಧೈರ್ಯ ತುಂಬಿ ತಾವು ಉಳುಮೆ ಮಾಡುತ್ತಿದ್ದ ಜಮೀನನ್ನು ತಾವೇ ಪಡೆದುಕೊಳ್ಳುವಂತೆ ಪ್ರೇರೇಪಿಸುತ್ತಿದ್ದರು. ಯಾವುದೇ ಪರಿಹಾರ ನೀಡದೆ ತಾವು ಉಳುಮೆ ಮಾಡುವ ಭೂಮಿಯನ್ನು ಪಡೆದುಕೊಳ್ಳುವುದು ರೈತರ ಹಕ್ಕು ಎಂಬುದನ್ನು ಮನದಟ್ಟು ಮಾಡುವ ಕಾರ್ಯವನ್ನು ಮಾಡುತ್ತಿದ್ದರು. ಇಂತಹ ಕಾರ್ಯ ಚಟುವಟಿಕೆಗಳು ಗೋಪಾಲಗೌಡರನ್ನು ಗೇಣಿ ರೈತರ ಮನಸ್ಸಿನಲ್ಲಿ ಉಳಿಯುವಂತೆ ಮಾಡಿತು. ಹಾಗೆಯೇ ಸರ್ವಾಧಿಕಾರಿ ಧೋರಣೆ ಅನುಸರಿಸುತ್ತಿದ್ದ ಜಮೀನ್ದಾರರಿಗೆ ಸಿಂಹ ಸ್ವಪ್ನವಾಗಿದ್ದರು. ಜಮೀನ್ದಾರರ ವರ್ತನೆ ಕಾನೂನಿನ ದೃಷ್ಟಿಯಿಂದ ಮತ್ತು ನೈತಿಕವಾಗಿ ತಪ್ಪು. ಈ ರೀತಿಯ ಕಾನೂನುಬಾಹಿರ ಮತ್ತು ದಬ್ಬಾಳಿಕೆಯ ವರ್ತನೆಯ

ವಿರುದ್ಧ ರೈತರನ್ನು ಸಜ್ಜುಗೊಳಿಸಿದ ರೀತಿ ಮತ್ತು ಸ್ವತಃ ತಾವೇ ಅದನ್ನು ದಿಟ್ಟವಾಗಿ ಎದುರಿಸಿದ ರೀತಿ ಜಮೀನ್ದಾರರಲ್ಲಿ ನಡುಕವನ್ನು ಹುಟ್ಟಿಸಿತ್ತು. ಈ ಚಟುವಟಿಕೆಯಿಂದಾಗಿ ಜಮೀನ್ದಾರರ ಮನದಾಳದಲ್ಲಿಯೂ ದುಃಸ್ವಪ್ನವಾಗಿ ಉಳಿದುಕೊಂಡರು. ಇನ್ನೂ ಕೆಲವು ಜಮೀನ್ದಾರರು ಅತ್ಯಂತ ನ್ಯಾಯಯುತವಾದ ಹಾಗೂ ನೈತಿಕ ತಳಹದಿಯ ಮೇಲೆ ಬದುಕುತ್ತಿದ್ದರು. ಇಂತಹ ಬಹುತೇಕ ವಿಚಾರವಂತ ಜಮೀನ್ದಾರರು ಗೋಪಾಲಗೌಡರ ತಾತ್ವಿಕ ತಳಹದಿಯ, ನ್ಯಾಯುತವಾದ ಮತ್ತು ವೈಚಾರಿಕ ತಳಹದಿಯ ಮೇಲಿನ ಹೋರಾಟವನ್ನು ಮೂಲಭೂತವಾಗಿ ಅರಿತುಕೊಂಡು ಅವರ ಪ್ರಭಾವಕ್ಕೊಳಗಾಗಿ ಸ್ವತಃ ಜಮೀನ್ದಾರರೇ ಮುಂದೆ ಬಂದು ತಮ್ಮ ಜಮೀನನ್ನು ಗೇಣೀದಾರರಿಗೆ ಬಿಟ್ಟುಕೊಟ್ಟ ಉದಾಹರಣೆಗಳು ಮಲೆನಾಡಿನ ಭಾಗದಲ್ಲಿದೆ. ಈಗಲೂ ಕೆಲವು ರೈತ ಕುಟುಂಬಗಳು ಹಿಂದಿನ ಘಟನೆಗಳನ್ನು ನೆನಪಿಸಿಕೊಳ್ಳುವಾಗ ಕೆಲವು ಜಮೀನ್ದಾರರನ್ನು ಉದಾಹರಿಸಿ ತಮಗೆ ಜಮೀನಿನ ಖಾತೆಯನ್ನು ಅವರೇ ಸ್ವತಃ ಹಾಕಿಸಿಕೊಟ್ಟಿದ್ದರೆನ್ನುತ್ತಾರೆ. ಉದಾಹರಣೆಗೆ ಕಾಂಗ್ರೆಸ್ಸಿನ ಪ್ರಭಾವಿ ಮುಖಂಡರು, ಉದಾರ ಮನೋಭಾವವುಳ್ಳವರು ಆಗಿದ್ದ ಎ.ಎಸ್. ಬದರಿ ನಾರಾಯಣ್ ಅಯ್ಯಂಗಾರ್ ಇವರು ತಮ್ಮ ಒಕ್ಕಲುಗಳಿಗೆ ತಾವೇ ಸ್ವತಃ ಜಮೀನಿನ ಖಾತೆ ಹಾಕಿಸಿಕೊಟ್ಟಿದ್ದರು ಎನ್ನಲಾಗಿದೆ. ಒಟ್ಟಿನಲ್ಲಿ ಗೋಪಾಲಗೌಡರು ಕೇವಲ ಗೇಣಿದಾರರ ಮೇಲೆ ಮಾತ್ರ ಪ್ರಭಾವ ಬೀರದೆ ಜಮೀನ್ದಾರರ ಮೇಲೆಯೂ ಗಾಢ ಪ್ರಭಾವ ಬೀರಿದ್ದರು.

ಮಲೆನಾಡಿನ ಭಾಗದಲ್ಲಿ ವಿಶೇಷವಾಗಿ ವಿಚಾರವಂತ ಯುವ ಜನತೆ ಗೋಪಾಲಗೌಡರ ವ್ಯಕ್ತಿತ್ವ ಮತ್ತು ನಡೆ -ನುಡಿಗಳಿಂದ ಆಕರ್ಷಿಸಲ್ಪಟ್ಟಿದ್ದರು. ಜಾತಿ, ಧರ್ಮ, ವರ್ಗಬೇಧವಿಲ್ಲದೆ ಮಲೆನಾಡಿನ ಯುವಕರ ದಂಡೇ ಇವರ ಹಿಂದೆ ಇರುತ್ತಿತ್ತು. ಇವರ ಸರಳವಾದ ನಡೆ -ನುಡಿ, ಜಾತ್ಯಾತೀತ ನಿಲುವು, ಅನ್ಯಾಯದ ವಿರುದ್ಧದ ನಿಸ್ವಾರ್ಥ ಪ್ರಾಮಾಣಿಕ ಹೋರಾಟ, ಇವರ ಶ್ರೇಷ್ಠ ಮಟ್ಟದ ಉನ್ನತ ಜ್ಞಾನ ನಾಯಕತ್ವ ಗುಣಗಳಿಂದಾಗಿ ಎಲ್ಲಾ ಜಾತಿ, ವರ್ಗದ ಜನರು ತಮ್ಮ ಜಾತಿ ವರ್ಗದ ನಿರ್ಬಂಧಗಳನ್ನು ಮೀರಿ ಹೊರಬಂದು ಗೋಪಾಲಗೌಡರ ಹಿಂಬಾಲಕರಾಗುತ್ತಿದ್ದರೆನ್ನುವುದಕ್ಕೆ ಹಲವು ನಿದರ್ಸನಗಳಿವೆ. ಡಾ|| ಯು.ಆರ್. ಅನಂತಮೂರ್ತಿ ಯವರೇ ಹೇಳಿರುವಂತೆ ''ಜೀವನದ ದಿನನಿತ್ಯದ ನಿಜಕ್ಕೂ ಬದಲಾವಣೆಯ ಆತುರಕ್ಕೂ ಒಟ್ಟಿಗೆ ಸ್ಪಂದಿಸುವ '' ಇವರ ವ್ಯಕ್ತಿತ್ವ ಇವರಂತೆ ಯೋಚಿಸುವ ಯುವಕರನ್ನು ಸಹಜವಾಗಿ

ಆಕರ್ಷಿಸುತ್ತಿತ್ತು.

ಗೋಪಾಲಗೌಡರು ಮಲೆನಾಡಿನ ಭಾಗದಲ್ಲಿ ಅನೇಕ ಸಮಾಜವಾದಿ ಸಂಘಟನೆಗಳು ಜನ್ಮ ತಾಳಲು ಕಾರಣಕರ್ತರಾಗಿದ್ದರು. ತೀರ್ಥಹಳ್ಳಿಯಲ್ಲಿ 'ಹಿಂದ್ ಕಿಸಾನ್ ಪಂಚಾಯಿತಿ ' ಶಾಖೆಯನ್ನು ಆರಂಭಿಸಿ ರೈತರ ಪರ ಹೋರಾಟಗಳನ್ನು ಸಂಘಟಿಸಲು ಅನುವು ಮಾಡಿಕೊಟ್ಟಿದ್ದರು. ಕನ್ನಡ ನಾಡು -ನುಡಿಯ ಉಳಿವಿಗಾಗಿ 'ಕನ್ನಡ ಯುವಜನ ಸಭಾ' ವನ್ನು ಅಸ್ತಿತ್ವಕ್ಕೆ ತಂದರು. ಹಾಗೆಯೇ ಮಲೆನಾಡಿನ ಹಲವು ಭಾಗಗಳಲ್ಲಿ ರೈತ ಸಂಘಗಳು ಅಸ್ತಿತ್ವಕ್ಕೆ ಬರಲು ಮತ್ತು ರೈತರ ಪರವಾದ ಹೋರಾಟಗಳನ್ನು ಸಂಘಟಿಸಲು ಕಾರ್ಯ ಚಟುವಟಿಕೆಗಳನ್ನು ಹಮ್ಮಿಕೊಳ್ಳಲು ಪ್ರೇರಕ ಶಕ್ತಿಯಾಗಿದ್ದರು. ಹೀಗೆ ಹತ್ತು ಹಲವಾರು ಸಂಘಟನೆಗಳನ್ನು ಹುಟ್ಟು ಹಾಕುವ ಮೂಲಕ ಜನರನ್ನು ಸಂಘಟಿಸಿ ಅನ್ಯಾಯದ ವಿರುದ್ಧದ ಹೋರಾಟಕ್ಕೆ ಅಣಿಗೊಳಿಸುವುದರ ಮೂಲಕ ಅವರ ಮೇಲೆ ತಮ್ಮದೇ ಆದ ಪ್ರಭಾವವನ್ನು ಬೀರಿದ್ದಾರೆ.

ಮಲೆನಾಡಿನಲ್ಲಿ ಇವರು ಇಂದಿಗೂ ಜನರ ಮನದಲ್ಲಿ ಉಳಿಯಬಹುದಾದ ಅವರ ವಿಶಿಷ್ಟ ಪ್ರತಿಭೆ ಎಂದರೆ ಅವರ ವಾಗ್ಮಿತೆ. ಇವರ ಬಹುತೇಕ ಎಲ್ಲಾ ಭಾಷಣಗಳು ಸಮಾಜವಾದಿ ಹಿನ್ನೆಲೆಯಲ್ಲಿರುತ್ತಿತ್ತು. ಅಂತೆಯೇ ನಿರ್ದಿಷ್ಟ ತಾತ್ವಿಕ ಹಾಗೂ ಸೈದ್ಧಾಂತಿಕ ಹಿನ್ನೆಲೆಯಲ್ಲಿ ಯಾವುದೇ ವಿಷಯವನ್ನು ಎಳೆ -ಎಳೆಯಾಗಿ ಸಮರ್ಥವಾಗಿ ಬಿಡಿಸಿ ಹೇಳುವ ರೀತಿ, ಯಾವುದೇ ವಿಷಯವನ್ನು ಉತ್ಕೃಷ್ಟ ಜ್ಞಾನ ಶಕ್ತಿಯ ಮೂಲಕ ವಿಶ್ಲೇಷಿಸುವ, ಅರ್ಥಪೂರ್ಣವಾಗಿ ವಿಷಯವನ್ನು ಮಂಡಿಸುವ ಆ ಮೂಲಕ ತನ್ನ ಭಾವನೆಗಳನ್ನು ವ್ಯಕ್ತಪಡಿಸುವ ವಿಧಾನ ಎಂತಹವರ ಮನಸ್ಸನ್ನಾದರೂ ಸೂರೆಗೊಳ್ಳುತ್ತಿತ್ತು. ಇವರು ಮಲೆನಾಡಿನ ಮೂಲೆ -ಮೂಲೆಯಲ್ಲಿ ಪರಿಚಿತರಾಗಿ ಕೀರ್ತಿ ಗಳಿಸಲು ಇವರ ಮಾತಿನ ಮೋಡಿ ಹಾಗೂ ಇವರ ಕಾರ್ಯಚಟುವಟಿಕೆಗಳ ವಿಧಾನಗಳೇ ಬಹುತೇಕ ಕಾರಣವಾಗಿತ್ತು. ಇವರ ಮಾತಿನ ಶೈಲಿ, ಮಾತಿನ ವೈಖರಿ ಎಂತಹ ಹಳ್ಳಿಯ ಅವಿದ್ಯಾವಂತ ಜನತೆಯನ್ನೂ ಆಕರ್ಷಿಸುತ್ತಿತ್ತು. ಆದ್ದರಿಂದಲೇ ಇವರ ಹಿಂದೆ ಸಾಮಾನ್ಯ ರೈತ ಕಾರ್ಮಿಕನಿಂದ ಹಿಡಿದು ಕವಿ ಸಾಹಿತಿಗಳವರೆಗಿನ ಎಲ್ಲಾ ವರ್ಗದ ಜನರು ಇರುತ್ತಿದ್ದರು ಹಾಗೂ ಅವರೆಲ್ಲರ ಪ್ರೀತಿ ವಿಶ್ವಾಸಕ್ಕೂ ಪಾತ್ರರಾಗಿದ್ದರು.

ಗೋಪಾಲಗೌಡರು ಮಲೆನಾಡಿನ ಜನರೊಂದಿಗಿನ ಸಹಜೀವನ ಮತ್ತು ಮಾತಿನ ವೈಖರಿಯ ಮೂಲಕ ಈ ಭಾಗದ ಜನತೆಯ ಮನದಾಳದಲ್ಲಿ ಅಚ್ಚಳಿಯದೆ ಉಳಿದರೆ, ಅವರು ಶಾಸನ ಸಭೆಯಲ್ಲಿ ಮಾಡಿದ ಭಾಷಣಗಳು ಮತ್ತು ಚರ್ಚೆಗಳ ಮೂಲಕ ಇಡೀ ಕನ್ನಡ ನಾಡಿನ ಜನರ ಮನಸ್ಸನ್ನು ಸೂರೆಗೊಳ್ಳುವುದರ ಮೂಲಕ ನಾಡಿನ ಜನತೆಯ ವಿಶ್ವಾಸಕ್ಕೆ ಪಾತ್ರರಾಗಿದ್ದರು. ಶಾಸನ ಸಭೆಯ ಭಾಷಣ ಕುರಿತು ಶ್ರೀಮಾನ್ ಬಂಗಾರಪ್ಪನವರು ತಮ್ಮ ಅಭಿಪ್ರಾಯವನ್ನು ಈ ರೀತಿ ವ್ಯಕ್ತಪಡಿಸಿದ್ದಾರೆ.

> '' ತಾತ್ವಿಕ ಹಾಗೂ ಸೈದ್ಧಾಂತಿಕ ಹಿನ್ನೆಲೆಯಲ್ಲಿ ಸಮಾಜವಾದದ ಎಳೆಗಳನ್ನು ಅಷ್ಟು ಸಮರ್ಥವಾಗಿ ಬಿಡಿ ಬಿಡಿಯಾಗಿ ಬಿಡಿಸಿಡುವ ಶಕ್ತಿಯಾಗಲಿ, ಅದನ್ನು ವಿಶ್ಲೇಷಣೆ ಮಾಡಿ ಅರ್ಥಪೂರ್ಣ ಭಾವನೆಗಳ ಜೊತೆಯಲ್ಲಿ ಆಳವಾದ ಅನುಭವದ ಹಿನ್ನೆಲೆಯಲ್ಲಿ ಇಡೀ ಶಾಸನ ಸಭೆಯ ಸದಸ್ಯರ ಮನಸ್ಸನ್ನೇ ಸೂರೆಗೊಳ್ಳುವ ಏಕೈಕ ದಿಟ್ಟತನದ ವ್ಯಕ್ತಿ ಗೋಪಾಲಗೌಡರೊಬ್ಬರೇ. ಅಂಥ ಆದರ್ಶ ಶಾಸಕ ಇನ್ನೊಬ್ಬನಿಲ್ಲ. ತಾನು ನಂಬಿದ ತತ್ವಕ್ಕೆ ಬದ್ಧನಾಗಿದ್ದು ವಿಚಾರ ಕ್ರಾಂತಿಯ ಸುಳಿಗೆ ಜನಸಮೂಹವನ್ನು ಸುಲಭವಾಗಿ ಆಯಸ್ಕಾಂತದಂತೆ ಸೆಳೆಯಬಲ್ಲ ಮಾತಿನ ಜಾಲಗಾರ ಇನ್ನೊಬ್ಬನಿಲ್ಲ ''

ಅವರ ಮಾತಿನ ಪ್ರಾಮಾಣಿಕತೆ, ತತ್ವ, ನಿಷ್ಠೆ ಹೋರಾಟ ಮಾತಿನ ಮೋಡಿ ಈ ಎಲ್ಲಾ ಗುಣವಿಶೇಷಗಳಿಂದ ಅವರೊಬ್ಬರು ಕರ್ನಾಟಕದ ರಾಜಕಾರಣದಲ್ಲಿ ಎಂದೂ ಸಿಗಲಾರದ ಅಪರೂಪದ ವಿಶಿಷ್ಟ ವ್ಯಕ್ತಿ. ಇವರ ಮಾತುಗಳನ್ನು ಗಮನಿಸಿದಾಗ ಗೋಪಾಲಗೌಡರ ಭಾಷಣದ ವೈಖರಿಯೇ ಸಮಸ್ತ ಜನತೆಯನ್ನು ಆಕರ್ಷಿಸುವ ಮತ್ತು ಅವರ ಹೃದಯದಲ್ಲಿ, ಮನಸ್ಸಿನಲ್ಲಿ ಶಾಶ್ವತವಾಗಿ ಉಳಿದುಕೊಳ್ಳುವಂತೆ ಮಾಡುತ್ತಿತ್ತು ಎನ್ನುವುದು ವೇದ್ಯವಾಗುತ್ತದೆ.

ಮಲೆನಾಡಿನ ಜನತೆಯ ಮೇಲೆ ಪ್ರಭಾವ ಬೀರಿದ ಇವರ ಇನ್ನೊಂದು ಗುಣ ಎಂದರೆ ಸಾಮಾನ್ಯ ಜನತೆಯ ಜೊತೆಯಲ್ಲಿ ಮಿಳಿತವಾಗುವ ಗುಣ. ಗೋಪಾಲಗೌಡರು ರಾಜ್ಯ ಮಟ್ಟದ ನಾಯಕರಾಗಿ ಪಕ್ಷದ ರಾಷ್ಟ್ರೀಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದರೂ ತಮ್ಮ ಬದುಕಿನ ಬಹುತೇಕ ಸಮಯವನ್ನು ಮಲೆನಾಡಿನ ಸಾಮಾನ್ಯ ಜನತೆಯ ಜೊತೆಯಲ್ಲಿ ಕಳೆದರು. ಇಲ್ಲಿ

---

*ಜೀವಂತ ಜ್ವಾಲೆ - ಸಂಪಾದಕ - ಕೋಣಂದೂರು ವೆಂಕಪ್ಪ, ಲೇಖನ - ಎಸ್.ಬಂಗಾರಪ್ಪ

ಕೆಳಜಾತಿ, ಉನ್ನತ ಜಾತಿ ಎಂಬ ತಾರತಮ್ಯ ಮಾಡದೆ ಎಲ್ಲಾ ಜಾತಿ, ಧರ್ಮ, ವರ್ಗ ಭಾವನೆಗಳನ್ನು ಮೀರಿ ಜಾತ್ಯಾತೀತ ತಳಹದಿಯ ಮೇಲೆ ಬದುಕಿದರು. ಯಾರದೇ ಮನೆಯಲ್ಲಿ ಉಳಿದುಕೊಳ್ಳುತ್ತಿದ್ದರು. ಊಟೋಪಚಾರ ಮಾಡುತ್ತಿದ್ದರು. ಸಾಮಾನ್ಯ ಜನತೆಯ ಕಷ್ಟಸುಖಗಳಲ್ಲಿ ಭಾಗಿಯಾಗುತ್ತಿದ್ದು, ತಮ್ಮ ಮಾನವೀಯ ಗುಣವನ್ನು ಮೆರೆಯುತ್ತಿದ್ದರು. ಸಹಜೀವನ, ಸಹಬಾಳ್ವೆ, ಸರಳ ನಡೆ -ನುಡಿ , ಅಂತರಜಾತಿ ವಿವಾಹ ಇಂತಹ ಅಂಶಗಳಿಗೆ ಹೆಚ್ಚು ಮಹತ್ವ ನೀಡುವುದರ ಮೂಲಕ ಸಮಾಜವಾದಿ ತತ್ವಕ್ಕೆ ಬದ್ಧನಾಗಿ ಸಮಾಜದ ಆಮೂಲಾಗ್ರ ಬದಲಾವಣೆಗೆ ನಿರಂತರ ಪ್ರಯತ್ನಿಸಿದ ಗೋಪಾಲಗೌಡರು ಸಹಜವಾಗಿಯೇ ಮಲೆನಾಡಿನ ಜನತೆಯ ಮೇಲೆ ಗಾಢ ಪ್ರಭಾವ ಬೀರಿದ್ದಾರೆ.

ಮಲೆನಾಡಿನ ಭಾಗದ ಜನತೆಯಲ್ಲಿ ಇಂದಿಗೂ ಮನೆಮಾತಾಗಿರುವ ಒಂದು ಪ್ರಭಾವಯುತ ವಿಷಯ ಎಂದರೆ ಅವರು ಸ್ಪರ್ಧಿಸಿದ ಚುನಾವಣೆಗಳು. ಇವರು ಯಾವುದೇ ಚುನಾವನೆಯಲ್ಲಿ ಸ್ಪರ್ಧಿಸಿದಾಗಲೂ ಜೇಬಿನಲ್ಲಿ ಒಂದು ಪೈಸೆ ಹಣವೂ ಇರುತ್ತಿರಲಿಲ್ಲ. ತಮ್ಮ ಅಭಿಮಾನಿಗಳೇ ಠೇವಣಿ ಹಣವನ್ನು ಕಟ್ಟಿ ಚುನಾವಣೆಯಲ್ಲಿ ಸ್ಪರ್ಧಿಸುವಂತೆ ಇವರನ್ನು ಪ್ರೋತ್ಸಾಹಿಸುತ್ತಿದ್ದರು. ಹಾಗೆಯೇ ಚುನಾವಣಾ ಪ್ರಚಾರವೂ ಬಹಳ ಸರಳವಾಗಿ ದುಂದು ವೆಚ್ಚವಿಲ್ಲದೆ ಕೇವಲ ಅಭಿಮಾನಿಗಳ ಸಹಕಾರದಿಂದ ನಡೆಯುತ್ತಿತ್ತು. ಪ್ರತಿಸ್ಪರ್ಧಿ ಅಭ್ಯರ್ಥಿಗಳು ಹಣಬಲದಿಂದ ಚುನಾವಣೆಯನ್ನು ಎದುರಿಸುತ್ತಿದ್ದರೆ, ಇವರು ಜನಬಲದಿಂದ ಚುನಾವಣೆಯಲ್ಲಿ ಸ್ಪರ್ಧಿಸುತ್ತಿದ್ದರು. ಇವರು ಯಾವುದೇ ರೀತಿಯಲ್ಲಿ ಜನರನ್ನು ಮೋಸಗೊಳಿಸುವ, ಕುತಂತ್ರದ, ಭ್ರಷ್ಟ ರಾಜಕಾರಣ ಮಾಡದೆ ನಿರ್ದಿಷ್ಟ ಸಮಾಜವಾದ ತತ್ವ ಮತ್ತು ಸಿದ್ಧಾಂತವನ್ನು ಆಧಾರವಾಗಿಟ್ಟುಕೊಂಡು ತಮ್ಮ ನೇರ ನಡೆ -ನುಡಿಯ ಮೂಲಕ ಜನರನ್ನು ಆಕರ್ಷಿಸುತ್ತಿದ್ದರು. ''ತಮ್ಮ ಚುನಾವಣಾ ಭಾಷಣಗಳಲ್ಲಿ ಸಮಾಜವಾದ, ಸಮತಾವಾದ , ಗಾಂಧೀವಾದಗಳನ್ನು ಎಳೆ -ಎಳೆಯಾಗಿ ಎಲ್ಲರಿಗೂ ಅರ್ಥವಾಗುವಂತೆ ಬಿಡಿಸಿ ಹೇಳುತ್ತಿದ್ದರು. ಗೇಣಿ ಪದ್ಧತಿಯ ಶೋಷಣೆ, ಭೂಮಿ ಕಳೆದುಕೊಂಡವರಿಗೆ ಪರಿಹಾರ, ಭ್ರಷ್ಟಾಚಾರದ ಬಗೆಗಳು ಬಡತನಕ್ಕೆ ಮೂಲ ಕಾರಣಗಳು 'ಉಳುವವನೆ ಹೊಲದೊಡೆಯ ' ಯಾಕೆ ಆಗಬೇಕು ? ನೆಹರೂರವರ ಕೈಗಾರಿಕಾ ನೀತಿ, ಕರ್ನಾಟಕ ಏಕೀಕರಣ ಇವೆಲ್ಲವನ್ನು ಒಳಗೊಂಡು ಆಟಂಬಾಂಬಿನ ದುಷ್ಪರಿಣಾಮಗಳ

ತನಕ ಇವರ ಮಾತು ವ್ಯಾಪಿಸಿಕೊಳ್ಳುತ್ತಿತ್ತು. ರಾತ್ರಿ ಹನ್ನೆರಡು ಗಂಟೆಯಾದರೂ ಇವರು ಮಾತಿನ ವಿಸ್ತಾರವನ್ನು ಆದರ ಗಹನತೆಯನ್ನು ಕಡಿಮೆ ಮಾಡುತ್ತಿರಲಿಲ್ಲ. ಮಲೆನಾಡಿನ ಮೂಲೆ ಮೂಲೆಯಲ್ಲಿರುವ ಸಣ್ಣ ಹಳ್ಳಿಗಳೂ ಇವರ ಭಾಷಣವನ್ನು ಕೇಳಿವೆ. ತಮ್ಮ ನೀಳ ಬಿಳಿ ಜುಬ್ಬದ ಜೇಬಿಗೆ ಕೈಹಾಕುತ್ತಾ ಕಾಲರ್ ತಿರುವುತ್ತಾ ಸಭೆಯ ಅಧ್ಯಕ್ಷತೆ ವಹಿಸುತ್ತಿದ್ದ ಭೂಮಾಲೀಕರನ್ನು ಕುರಿತು ''ಸುಧಾರಣೆಯಲ್ಲಿ ನೀವೂ ಮುಖ್ಯ, ನೀವೂ ನಮ್ಮೊಡನೆ ಸೇರಿಕೊಂಡರೆ ಸಂಘರ್ಷ ವಿಲ್ಲದೆ ಸುಖೀ ಸಮಾಜ ಕಟ್ಟಬಹುದು '' ಎಂದು ಹಸನ್ಮುಖಿಯಾಗಿ ಹೇಳುತ್ತಿದ್ದರು. ಭಾಷಣದ ನಡುವೆ ತಮ್ಮ ವಿಚಾರಗಳಿಗೆ ಪೂರಕವಾಗಲು ಬೇಂದ್ರೆ , ಕುವೆಂಪು, ಗೋಪಾಲಕೃಷ್ಣ ಅಡಿಗರ ಕವಿತೆಗಳನ್ನು ಉದಾಹರಿಸುತ್ತಿದ್ದರು. ಹಳ್ಳಿಯ ಜನರು ಬೇಸರ ಪಡದಂತೆ ಎಲ್ಲವನ್ನು ತಿಳಿಸುತ್ತಿದ್ದರು''★ ಹೀಗೆ ಹಳ್ಳಿಗರ ಮನ ಮುಟ್ಟುವಂತ ಭಾಷಣದ ಮೂಲಕ ಅವರನ್ನು ಆಯಸ್ಕಾಂತದಂತೆ ತಮ್ಮ ಕಡೆಗೆ ಸೆಳೆಯುತ್ತಿದ್ದರು. ಈ ಜನರ ಬೆಂಬಲದಿಂದ ಸ್ಪರ್ಧಿಸಿದ ನಾಲ್ಕು ಚುನಾವಣೆಗಳಲ್ಲಿ ಮೂರರಲ್ಲಿ ಗೆಲುವನ್ನು ಸಾಧಿಸಿದರು. ಹೀಗೆ ಪ್ರಾಮಾಣಿಕರು, ಬಂಡವಾಳವಿಲ್ಲದೆ ಕೇವಲ ತಮ್ಮ ವ್ಯಕ್ತಿತ್ವ ಉನ್ನತ ಮಟ್ಟದ ಜ್ಞಾನ, ವಾಕ್ ಚತುರತೆಯಿಂದ, ಭ್ರಷ್ಟಾಚಾರರಹಿತವಾಗಿ ಚುನಾವಣೆಯಲ್ಲಿ ಜಯವನ್ನು ಸಾಧಿಸಬಹುದು ಎಂಬುವುದನ್ನು ಇಡಿ ನಾಡಿಗೆ ಅದರಲ್ಲೂ ಮಲೆನಾಡಿನ ಜನತೆಗೆ ತೋರಿಸಿಕೊಟ್ಟರು. ಇಂತಹ ಇವರ ವ್ಯಕ್ತಿತ್ವ ಇಂದಿಗೂ ಮಲೆನಾಡಿನ ಭಾಗದಲ್ಲಿ ಮನೆ ಮಾತಾಗಿದ್ದು, ಮಲೆನಾಡಿನ ಜನತೆಯ ನಡೆ -ನುಡಿಯನ್ನು ತಿದ್ದಲು ಸಹಕಾರಿಯಾದುದೇ ಅಲ್ಲದೆ ಆ ಪ್ರಭಾವ ಇಂದಿಗೂ ಉಳಿದುಕೊಂಡು ಬಂದಿರುವುದು ಕಂಡುಬರುತ್ತದೆ.

ಗೋಪಾಲಗೌಡರ ಪ್ರಭಾವ ಮತ್ತು ಅವರ ತತ್ವಾದರ್ಶಗಳೇ ಮಲೆನಾಡಿನಲ್ಲಿ ನಡೆಯುವ ಪ್ರತಿಯೊಂದು ಹೋರಾಟಕ್ಕೂ ಪ್ರೇರಕ ಶಕ್ತಿಯಾಗಿ ಇಂದಿಗೂ ಪ್ರಭಾವ ಬೀರುತ್ತಿದೆ. ಅಲ್ಲದೆ ಮಲೆನಾಡಿನ ಭಾಗದಲ್ಲಿ ಅನೇಕ ಜನ ಸಮಾಜವಾದಿ ನಾಯಕರನ್ನು ಬೆಳೆಸುವಲ್ಲಿ ಇವರು ತಮ್ಮದೇ ಆದ ಪ್ರಯತ್ನ ಮಾಡಿದ್ದಾರೆ. ಮುಖ್ಯವಾಗಿ ಕೋಣಂದೂರು ಲಿಂಗಪ್ಪ , ಕಾಗೋಡು

---

★ನೆನಪಿನ ಸಂಪುಟ -ಸಂಪಾದಕರು : ಕಾಳೇಗೌಡ ನಾಗವಾರ ಮತ್ತು ಜಿ.ವಿ. ಆನಂದಮೂರ್ತಿ. ಲೇಖನ - ಅನಿಕೇತನ -ಕಡಿದಾಳ್ ಶಾಮಣ್ಣ.

ತಿಮ್ಮಪ್ಪ , ಎಸ್.ಬಂಗಾರಪ್ಪ ಮುಂತಾದವರು ತೀರಾ ಬಡತನದಿಂದ ಬಂದವರಾದರೂ ಅವರಲ್ಲಿ ಸಮಾಜವಾದಿ ತತ್ವಾದರ್ಶಗಳನ್ನು ತುಂಬಿ, ಅವರಲ್ಲಿ ನಾಯಕತ್ವದ ಗುಣಗಳನ್ನು ಬೆಳೆಸಿ ಅವರು ರಾಜಕೀಯ ಪ್ರವೇಶಿಸಿ ಶಾಸಕರಾಗಲು ಗೋಪಾಲಗೌಡರೇ ಕಾರಣರಾದರು. ಇವರ ವ್ಯಕ್ತಿತ್ವ , ನಡೆ, ನುಡಿ ಹಾಗೂ ಅವರ ಪ್ರಭಾವಕ್ಕೊಳಗಾದ ಬಹುತೇಕ ನಾಯಕರು ಅವರನ್ನು ರಾಜಕೀಯ ಗುರುಗಳೆಂದು, ಮಾರ್ಗದರ್ಶಕರೆಂದು ನಮ್ಮ ನಾಯಕರೆಂದು ಮಲೆನಾಡಿನ ಸತ್ಪುತ್ರನೆಂದು, ಮಲೆನಾಡಿನ ಮಹಾತ್ಮನೆಂದು ಹೀಗೆ ಹಲವು ಹೆಸರುಗಳಿಂದ ಕರೆದಿದ್ದಾರೆ. ಹೀಗೆ ಮಲೆನಾಡಿನಲ್ಲಿ ಸಾಮಾನ್ಯ ಜನತೆ ರಾಜಕೀಯ ನೆಲೆ ಕಂಡುಕೊಳ್ಳಲು ಇವರ ಪ್ರಭಾವವೇ ಮುಖ್ಯ ಕಾರಣವಾಗಿತ್ತು. ಇವರ ಪ್ರಭಾವ ಮಲೆನಾಡಿನ ಭಾಗದಲ್ಲಿ ಎಷ್ಟು ಪರಿಣಾಮಕಾರಿಯಾಗಿತ್ತೆಂದರೆ, ಇವರ ಮರಣ ನಂತರ ಇವರ ಹೆಸರನ್ನು ಹೇಳಿಕೊಂಡು ಇವರು ಸಮಾಜವಾದದ ಸಂಕೇತವಾಗಿ ನೀಡಿದ ಕೆಂಪು ಮಫ್ಲಾರ್ ತೋರಿಸಿಯೇ ಕೋಣಂದೂರು ಲಿಂಗಪ್ಪನವರು 1972 ರ ವಿಧಾನ ಸಭಾ ಚುನಾವಣೆಯಲ್ಲಿ ಗೆದ್ದು ಬಂದರು ಎಂಬ ಅಭಿಪ್ರಾಯವಿದೆ. ಹಾಗೆಯೇ ಅಂದಿನಿಂದ ಇಂದಿನವರೆಗೂ ಪ್ರತೀ ಚುನಾವಣೆಯಲ್ಲಿಯೂ ಗೋಪಾಲಗೌಡರ ಹೆಸರನ್ನು ಅವರ ತತ್ವಾದರ್ಶಗಳನ್ನು ಬಳಸಿಕೊಳ್ಳದ ರಾಜಕೀಯ ಪಕ್ಷಗಳಾಗಲಿ, ಅಭ್ಯರ್ಥಿಗಳಾಗಲಿ ಇಲ್ಲ. ಯಾವುದೇ ಅಭ್ಯರ್ಥಿ ಯಾವುದೇ ಪಕ್ಷದಿಂದ ಸ್ಪರ್ಧಿಸಿದರೂ ನಾವು ಗೋಪಾಲಗೌಡರ ತತ್ವದ ಆಧಾರದ ಮೇಲೆ ಸಮಾಜದ ಅಭಿವೃದ್ಧಿಯ ಕಾರ್ಯಚಟುವಟಿಕೆಯನ್ನು ಹಮ್ಮಿಕೊಳ್ಳುವ ಗುರಿಗಳನ್ನು ಹೊಂದಿದ್ದೇವೆ ಎಂಬ ಭರವಸೆಯನ್ನು ಜನತೆಗೆ ನೀಡುತ್ತಿರುವುದು ಮತ್ತು ಆ ಮೂಲಕ ಜನರ ಬೆಂಬಲ ಗಳಿಸುವ ಪ್ರಯತ್ನವನ್ನು ಮಾಡುತ್ತಾರೆ. ಒಟ್ಟಿನಲ್ಲಿ ಮಲೆನಾಡಿನ ಜನತೆಯಲ್ಲಿ ಸಮಾಜವಾದಿ ತತ್ವಗಳು ಆಳವಾಗಿ ಬೇರೂರುವಂತೆ ಮಾಡಿ ಮಲೆನಾಡನ್ನು ಕರ್ನಾಟಕದ ರಾಜ್ಯದ ಸಮಾಜವಾದದ ತಾಣವನ್ನಾಗಿ ಪರಿವರ್ತಿಸಿದ ಕೀರ್ತಿ ಗೋಪಾಲಗೌಡರಿಗಿದೆ.

ಗೋಪಾಲಗೌಡರು ಸುಮಾರು ಹದಿನೈದು ವರ್ಷಗಳ ಕಾಲ ಶಾಸನ ಸಭೆಯ ಸದಸ್ಯರಾಗಿ ಮಲೆನಾಡಿನ ಅಭಿವೃದ್ಧಿಗಾಗಿ ಬಹಳಷ್ಟು ಶ್ರಮಿಸಿದ್ದಾರೆ. ಅದರಲ್ಲಿ ಮುಖ್ಯ ಸಾಧನೆ ಎಂದರೆ ಗೇಣಿ ರೈತರ ಪರವಾದ ಕಾಯಿದೆ ಜಾರಿಗೊಳ್ಳುವಲ್ಲಿ ವಿಶಿಷ್ಟ ಪಾತ್ರ ವಹಿಸಿದ್ದಾರೆ. ಜೊತೆಗೆ ಈ ಕಾಯಿದೆ

ಮಲೆನಾಡ ಭಾಗದಲ್ಲಿ ಸರಳ ರೀತಿಯಲ್ಲಿ ಮತ್ತು ವ್ಯಾಪಕವಾಗಿ ಅನುಷ್ಠಾನಗೊಳ್ಳುವಂತೆ ನೋಡಿಕೊಂಡಿದ್ದಾರೆ. ಹಾಗೆಯೇ ಲೆವಿ ವ್ಯವಸ್ಥೆಯನ್ನು ಸರಳ ರೂಪದಲ್ಲಿ ರೈತರಿಗೆ ಅನುಕೂಲವಾಗುವ ರೀತಿಯಲ್ಲಿ ರೂಪಿಸಬೇಕೆಂದು ಶಾಸನ ಸಭೆಯಲ್ಲಿ ಆಗ್ರಹಿಸಿ, ಹೊಸ ಲೆವಿ ವ್ಯವಸ್ಥೆ ಜಾರಿಗೊಳ್ಳಲು ಪ್ರಯತ್ನಿಸಿದರು. ಶಾಸಕರಾಗಿ ತಮ್ಮ ಕ್ಷೇತ್ರಕ್ಕೆ ಸರ್ಕಾರದಿಂದ ಮಂಜೂರಾದ ಯಾವುದೇ ಸೌಲಭ್ಯಗಳನ್ನು ಭ್ರಷ್ಟಾಚಾರಕ್ಕೆ ಒಳಗಾಗದೆ, ನಿಷ್ಪಕ್ಷಪಾತವಾಗಿ, ಪ್ರಾಮಾಣಿಕವಾಗಿ ಬಡಜನತೆಗೆ ತಲುಪಿಸುವ ಪ್ರಯತ್ನ ಮಾಡಿದ್ದಾರೆ. ಸರ್ಕಾರದಿಂದ ಮಂಜೂರಾದ ನಿವೇಶನಗಳನ್ನು ಒಂದೊಂದು ಜಾತಿಗೆ ಪ್ರತ್ಯೇಕವಾಗಿ ಹಂಚದೆ ಎಲ್ಲಾ ಜಾತಿಯ ಜನರು ಒಟ್ಟಿಗೆ ಬಾಳುವಂತೆ ನಿವೇಶನಗಳನ್ನು ಹಂಚಬೇಕು. ಆ ಮೂಲಕ ಜಾತಿಗಳ ನಡುವಿನ ಸಾಮರಸ್ಯ ಬಾಳ್ವೆಗೆ ಅವಕಾಶ ನೀಡಬೇಕೆಂದು ಸೂಚನೆ ನೀಡುತ್ತಿದ್ದರು. ಹಾಗೆಯೇ ರಸ್ತೆ ನಿರ್ಮಾಣ, ಕುಡಿಯುವ ನೀರಿನ ಸೌಲತ್ತುಗಳು, ವಿದ್ಯುಚ್ಛಕ್ತಿ ಮೊದಲಾದ ಸೌಲತ್ತುಗಳನ್ನು ನೀಡುವಾಗ ಪಕ್ಷಾತೀತವಾಗಿ ನಡೆದುಕೊಂಡರು. ಶಾಲಾ ಕಾಲೇಜುಗಳ ಮಂಜೂರಾತಿ, ಆರೋಗ್ಯ ವ್ಯವಸ್ಥೆ ಇಂತಹ ಹಲವು ಸೌಲತ್ತುಗಳು ಮಲೆನಾಡಿನ ಜನತೆಗೆ ಲಭಿಸುವಲ್ಲಿ ಇವರ ಪ್ರಯತ್ನ ಬಹಳಷ್ಟಿದೆ. ಮಲೆನಾಡಿನ ಭಾಗದಲ್ಲಿ ಮನೆ ಮಾಡಿಕೊಂಡಿದ್ದ ಪ್ಲೇಗು, ಕಾಲರದಂತಹ ರೋಗಗಳನ್ನು ಸಂಪೂರ್ನವಾಗಿ ನಿವಾರಿಸುವಂತೆ ಸರ್ಕಾರದಲ್ಲಿ ಒತ್ತಡ ತಂದು ಆ ನಿಟ್ಟಿನಲ್ಲಿ ಕಾರ್ಯೋನ್ಮುಖವಾಗುವಂತೆ ಪ್ರಯತ್ನಿಸಿದ್ದಾರೆ. ಇಂತಹ ಹಲವು ಪ್ರಯತ್ನಗಳು ಮತ್ತು ಸಾಧನೆಗಳು ಮಲೆನಾಡಿನ ಅಭಿವೃದ್ಧಿಯಲ್ಲಿ ತನ್ನದೇ ಆದ ಪ್ರಭಾವವನ್ನು ಬೀರಿವೆ.

ಗೋಪಾಲಗೌಡರ ಜೀವಿತ ಅವಧಿಯಲ್ಲಿ ಮಲೆನಾಡಿನ ಜನರಲ್ಲಿ ಸಮಾಜವಾದ ಮನೆ ಮಾಡಿತ್ತು. ಆ ಸಂದರ್ಭದಲ್ಲಿ ಅಸ್ತಿತ್ವದಲ್ಲಿದ್ದ ಅಸಮಾನತೆ, ಅನ್ಯಾಯ, ಜಾತಿಯತೆ, ಮತಾಂಧತೆ ವಿರುದ್ಧ ಜನರನ್ನು ಸಂಘಟಿಸಿ ಈ ಭಾಗದ ಜನತೆಯಲ್ಲಿ ಸನ್ನಡತೆ, ಪ್ರಾಮಾಣಿಕತೆ, ನಿಷ್ಪಕ್ಷಪಾತತೆ, ಪ್ರೀತಿ – ವಿಶ್ವಾಸದ ಭಾವನೆಗಳನ್ನು ಬೆಳೆಸಿ ಮಲೆನಾಡಿನ ಜನರ ಬದುಕಿನಲ್ಲಿ ಹೊಸ ಅಲೆಯನ್ನು ಸೃಷ್ಟಿಸಿದ ವ್ಯಕ್ತಿ ಎಂದರೆ ಗೋಪಾಲಗೌಡರು. ಇಂದು ಕರ್ನಾಟಕ ರಾಜ್ಯದಲ್ಲಿ ತೀರ್ಥಹಳ್ಳಿ ಕ್ಷೇತ್ರ ಒಂದು ಪ್ರತಿಷ್ಠಿತ ಕ್ಷೇತ್ರ ಎಂದು ಕರೆಸಿಕೊಳ್ಳಬೇಕಿದ್ದರೆ ಅಥವಾ ಮಲೆನಾಡಿನ ಜನತೆಯ ಬಗ್ಗೆ ಹೆಚ್ಚು ಪ್ರೀತಿ – ಗೌರವಾದರಗಳು ಲಭಿಸುತ್ತಿದ್ದರೆ, ಅದರಲ್ಲಿ ಗೋಪಾಲಗೌಡರ ಶ್ರಮದ ಪಾಲು

ಬಹಳ ಇದೆ ಎನ್ನುವುದು ಖಚಿತ ಸಂಗತಿ. ಇಂದು ಮಲೆನಾಡಿನ ಭಾಗದಲ್ಲಿ ಯಾವುದೇ ಚಳುವಳಿಗಳು ಅಥವಾ ಹೋರಾಟಗಳನ್ನು ಸಂಘಟಿಸುವ ಸಂದರ್ಭಗಳಲ್ಲಿ ಗೋಪಾಲಗೌಡರ ತತ್ವಾದರ್ಶ ಮತ್ತು ಹೋರಾಟದ ವಿಧಾನಗಳನ್ನು ಆಧಾರವಾಗಿಟ್ಟುಕೊಂಡೆ ರೂಪಿಸುವುದನ್ನು ಗಮನಿಸಬಹುದು. ಜೊತೆಗೆ ಇಂತಹ ಸಂದರ್ಭಗಳಲ್ಲಿ ಅವರ ಹೆಸರನ್ನು ಬಳಸಿಕೊಳ್ಳುವುದನ್ನು ಗಮನಿಸಬೇಕಾದ ಅಂಶ.

ಗೋಪಾಲಗೌಡರ ಪ್ರಭಾವಕ್ಕೊಳಗಾಗಿ ಅವರ ನೆರವಿನಿಂದಲೇ ಸಾರ್ವಜನಿಕ ಜೀವನವನ್ನು ಆರಂಭಿಸಿ ರಾಜಕೀಯ ನೆಲೆಯನ್ನು ಕಂಡುಕೊಂಡ, ತಮ್ಮ ಜೀವನದ ಅಸ್ತಿತ್ವವನ್ನು ಭದ್ರಪಡಿಸಿ ಕೊಂಡ ಹಲವಾರು ಜನ ನಾಯಕಮಣಿಗಳು ಇಂದು ತಮ್ಮ ಸಮಾಜವಾದಿ ತತ್ವಾದರ್ಶಗಳನ್ನು ಗಾಳಿಗೆ ತೂರಿ ಅವರ ತತ್ವ, ಆದರ್ಶಗಳಿಗೆ ವಿರುದ್ಧವಾಗಿ ವರ್ತಿಸುತ್ತಿರುವುದು ದೊಡ್ಡ ದುರಂತವಾಗಿ ಪರಿಣಮಿಸಿದೆ. ಅಲ್ಲದೆ ಅನೇಕ ಜನ ಭ್ರಷ್ಟ ರಾಜಕಾರಣಿಗಳು ತತ್ವರಹಿತ ರಾಜಕೀಯ ನಾಯಕರುಗಳು ಅವರ ಹೆಸರಿನಲ್ಲಿ ತಮ್ಮ ಅಸ್ತಿತ್ವವನ್ನು ಗಟ್ಟಿಗೊಳಿಸಿಕೊಳ್ಳುತ್ತಿರುವುದು ಅವರ ಹೆಸರಿಗೆ ಮಾಡುವ ಅಪಚಾರವಾಗಿ ಕಾಣಿಸುತ್ತಿದೆ. ಆದರೂ ಬಹಳ ಮಂದಿ ಅವರ ಅನುಯಾಯಿಗಳು ತಮ್ಮ ನಿತ್ಯ ಜೀವನದಲ್ಲಿ ಅವರ ನಡೆ -ನುಡಿ ತತ್ವಾದರ್ಶಗಳನ್ನು ಪಾಲಿಸುತ್ತಿರುವ ನಿದರ್ಶನಗಳು ಇಂದಿಗೂ ಕಂಡುಬರುತ್ತಿದ್ದು, ಸಾಮಾನ್ಯ ಜನತೆಯ ಮನದಾಳದಲ್ಲಿ ಅಮರರಾಗಿರುವುದನ್ನು ಕಾಣಬಹುದು.

# ಉಪ ಸಂಹಾರ

ಗೋಪಾಲಗೌಡರು ಒಬ್ಬ ವೈಚಾರಿಕ ಸಮಾಜವಾದಿ ಚಿಂತಕರಾಗಿದ್ದರು. ಪರಿಸರ ಪ್ರೇಮ, ಮಾನವ ಪ್ರೀತಿ, ಸರ್ವರಿಗೂ ಸಮಪಾಲು, ಸರ್ವರಿಗೂ ಸಮಬಾಳು ಎಂಬ ತತ್ವ – ಚಿಂತನೆಯ ನೆಲೆಗಟ್ಟಿನ ಮೇಲೆ ಹೊಸ ಸಾಂಸ್ಕೃತಿಕ ಸಮಾಜವನ್ನು ಕಟ್ಟುವ ಮಹದಾಸೆ ಕುವೆಂಪು ಕೃತಿಗಳಲ್ಲಿ ವ್ಯಕ್ತವಾಗಿದೆ. ಇಂತಹ ಮಾನವೀಯ ಮೌಲ್ಯಗಳನ್ನು ಆಧರಿಸಿದ ಸಾಂಸ್ಕೃತಿಕ ಸಮಾಜವನ್ನು ಸಮಾಜವಾದಿ ರಾಜಕಾರಣದ ಮೂಲಕ ಕಟ್ಟುವ ಕಾರ್ಯದಲ್ಲಿ ತೊಡಗಿದವರು ಶಾಂತವೇರಿ ಗೋಪಾಲಗೌಡರು. ವೈಯಕ್ತಿಕ ಅನುಭವದ ಮೂಲಕ ಒಂದು ತಾತ್ವಿಕ ಚೌಕಟ್ಟನ್ನು ರೂಪಿಸಿಕೊಂಡು ಹೋರಾಟಕ್ಕಿಳಿದ ಡಾ॥ ರಾಮಮನೋಹರ ಲೋಹಿಯಾ ಇವರ ಸಮಾಜವಾದಿ ತಾತ್ವಿಕತೆ ಮತ್ತು ಹೋರಾಟಗಳಿಂದ ಪ್ರಭಾವಿತಗೊಂಡ ಗೋಪಾಲಗೌಡರು ಗಾಂಧೀಜಿಯವರ ತತ್ವಾದರ್ಶಗಳನ್ನು ಮೈಗೂಡಿಸಿಕೊಂಡಿದ್ದರು. ಇವರು ಗಾಂಧೀಜಿ ಮತ್ತು ಲೋಹಿಯಾರವರ ತತ್ವ, ಚಿಂತನೆ, ಹೋರಾಟಗಳಿಂದ ಮಿಳಿತವಾದ ಒಂದು ಹೊಸ ಮಾರ್ಗವನ್ನು ತನ್ನ ಅನುಭವದ ಮೂಲಕ ಕಂಡುಕೊಂಡರು. ಅದನ್ನು ಕರ್ನಾಟಕದ ಜನತೆಯ ಸಾಮಾಜಿಕ ಬದುಕಿನಲ್ಲಿ ಅನ್ವಯಿಸಿ ಆ ಮೂಲಕ ಇಲ್ಲಿನ ಸಮಾಜದಲ್ಲಿ ಒಂದು ಹೊಸ ಸಾಂಸ್ಕೃತಿಕ ಬದುಕನ್ನು ರೂಪಿಸಲು ಪ್ರಯತ್ನಿಸಿರುವುದು ಕಂಡುಬರುತ್ತದೆ.

ಸಮಾಜವಾದ ಕಾಲದಿಂದ ಕಾಲಕ್ಕೆ ದೇಶದಿಂದ ದೇಶಕ್ಕೆ ಹೊಸ -ಹೊಸ ರೂಪವನ್ನು ಪಡೆದುಕೊಂಡ ಸಿದ್ಧಾಂತವಾಗಿದೆ. ಅಂತೆಯೇ ಗೋಪಾಲಗೌಡರು ಭಾರತೀಯ ಸಮಾಜ ವ್ಯವಸ್ಥೆಗೆ ಸರಿಹೊಂದುವ ತತ್ವವನ್ನು ತಮ್ಮ ಅನುಭವದ ಮೂಲಕ ರೂಪಿಸಿಕೊಂಡರು. ಭಾರತ ಬಡವರ ದೇಶ. ರೈತರೇ ದೇಶದ ಬೆನ್ನೆಲುಬು. ಅದರಲ್ಲಿಯೂ ಜನಬಾಹುಳ್ಯ ದೇಶ. ಆದ್ದರಿಂದ ಐರೋಪ್ಯ ದೇಶದಲ್ಲಿ ಆಚರಣೆಯಲ್ಲಿರುವ ಸಮಾಜವಾದ ಈ ದೇಶಕ್ಕೆ ಸರಿಹೊಂದುವುದಿಲ್ಲ. ಯಥಾವತ್ತಾಗಿ ಅದನ್ನೇ ಜಾರಿಗೆ ತಂದರೆ ಅದು ಭಾರತದ ಸಾಮಾಜಿಕ, ಆರ್ಥಿಕ ಸ್ಥಿತಿಗೆ ಹೊಂದಿಕೊಳ್ಳದೆ ದೊಡ್ಡ ದುರಂತವನ್ನೇ ಎದುರಿಸಬೇಕಾಗುತ್ತದೆ ಎಂಬುದನ್ನು ಮನಗಂಡಿದ್ದರು. ಮೂಲಭೂತವಾಗಿ ಕೃಷಿಯನ್ನಾಧರಿಸಿದ ಈ ದೇಶದಲ್ಲಿ ಮೂಲಭೂತವಾಗಿ ಕೃಷಿಯ ಸುಧಾರಣೆ ಮಾಡುವುದು, ಭ್ರಷ್ಟಾಚಾರ ನಿರ್ಮೂಲನೆ, ಅಧಿಕಾರಿಗಳಲ್ಲಿ ಶಿಸ್ತು , ಕಾರ್ಮಿಕರಲ್ಲಿ ಶಾಂತಿಪಾಲನೆ, ರಾಜಕಾರಣಿಗಳಲ್ಲಿ ಪ್ರಾಮಾಣಿಕತೆ, ಜಾತೀಯತೆ ಮತ್ತು ಪ್ರಾಂತೀಯ

ಮನೋಭಾವವನ್ನು ಮೂಲೋತ್ಪಾಟನೆ ಮಾಡುವುದೇ ಭಾರತದ ಮಟ್ಟಿಗೆ ನಿಜವಾದ ಸಮಾಜವಾದದ ಆಚರಣೆ ಎಂಬುದನ್ನು ಮನಗಂಡಿದ್ದರು. ಹೀಗಾಗಿಯೇ ಗೋಪಾಲಗೌಡರು ಸಮಾಜದ ಸಾಂಸ್ಕೃತಿಕ ಬದುಕನ್ನು ಆಮೂಲಾಗ್ರವಾಗಿ ಬದಲಾಯಿಸುವುದರ ಮೂಲಕ ಒಂದು ಹೊಸ ಸಮಾಜವನ್ನು ಕಟ್ಟುವ ಕಾರ್ಯದಲ್ಲಿ ತೊಡಗಿದ್ದರೆನ್ನುವುದು ವೇದ್ಯವಾಗುತ್ತದೆ.

ಸಮಾಜವಾದ ಅದೊಂದು ರಾಜಕೀಯ ಸಿದ್ಧಾಂತ ಎನ್ನುವುದಕ್ಕಿಂತ ಆರ್ಥಿಕ- ಸಾಮಾಜಿಕ ಜೀವನದ ಬದಲಾವಣೆಗೆ ಸಂಬಂಧಿಸಿದ ಸಿದ್ಧಾಂತವೆಂದು ತಿಳಿದ ಗೋಪಾಲಗೌಡರು ನಿರಂತರವಾಗಿ ಸಾಮಾಜಿಕ, ಆರ್ಥಿಕ ಅಸಮಾನತೆಗಳನ್ನು ಹೋಗಲಾಡಿಸುವ ಪ್ರಯತ್ನವನ್ನು ತಮ್ಮ ನಿತ್ಯ ಬದುಕಿನ ಮುಖ್ಯ ಭಾಗವನ್ನಾಗಿ ಮಾಡಿಕೊಂಡು ತಮ್ಮ ಸಾರ್ವಜನಿಕ ಜೀವನ ಹಾಗೂ ಶಾಸಕರಾಗಿ ಕಾರ್ಯ ನಿರ್ವಹಿಸುವಾಗ ಆರ್ಥಿಕ ಅಸಮಾನತೆಯನ್ನು ತೊಡೆದು ಹಾಕಲು ಪ್ರಯತ್ನ ಮಾಡಿದರು. ಆದ್ದರಿಂದಲೇ ಆರ್ಥಿಕ ಅಸಮಾನತೆಗೆ ವಿರುದ್ಧವಾದ ಜಮೀನ್ದಾರಿ ಪದ್ಧತಿ ರದ್ದುಗೊಳಿಸಬೇಕು. ಬೃಹತ್ ಉದ್ದಿಮೆಗಳನ್ನು ರಾಷ್ಟ್ರೀಕರಣಗೊಳಿಸಬೇಕು. ಜೊತೆಗೆ ಬ್ಯಾಂಕುಗಳ ರಾಷ್ಟ್ರೀಕರಣ, ಸಾರಿಗೆ ಸಂಪರ್ಕದ ರಾಷ್ಟ್ರೀಕರಣಕ್ಕೆ ಒತ್ತಾಯಿಸಿದ್ದರು. ರಾಜಧನ ಪದ್ಧತಿ ರದ್ದುಗೊಳಿಸಬೇಕು. ಮೈಸೂರು ದಸರಾದಂತಹ ವೈಭವಯುತ ಆಚರಣೆಗಳನ್ನು ಕೈಬಿಡಬೇಕೆಂದು ಒಂಟಿಯಾಗಿ ಹೋರಾಡಿದ್ದರು. ಆದಾಯ ತೆರಿಗೆಯನ್ನು ವಿಧಿಸಲು ಒತ್ತಾಯಿಸಿದ್ದರು. ಹೀಗೆ ಆರ್ಥಿಕ ಸಮಾನತೆಗೆ ವಿರುದ್ಧವಾದ ಹಲವು ಚಟುವಟಿಕೆ ಮತ್ತು ಕಾರ್ಯಕ್ರಮಗಳನ್ನು ಕೈಬಿಟ್ಟು ಆರ್ಥಿಕ ಸಮಾನತೆಗೆ ಪೂರಕವಾದ ಕಾರ್ಯಕ್ರಮಗಳನ್ನು ರೂಪಿಸುವಂತೆ ಒತ್ತಾಯಿಸಿದ್ದರಲ್ಲದೆ, ಸಮಾಜದ ದುರ್ಬಲ ಜನತೆಯ ಆರ್ಥಿಕ ಸ್ಥಿತಿಗತಿಯ ಸುಧಾರಣೆಗೆ ಯತ್ನಿಸಿದ್ದರು.

ಸಾಮಾಜಿಕ ಜೀವನದಲ್ಲಿನ ಅಸಮಾನತೆಗಳನ್ನು ತೊಡೆದು ಹಾಕಲು ಮೂಲಭೂತವಾಗಿ ಜಾತಿ ನಡುವಿನ ಅಂತರವನ್ನು ಕಡಿಮೆ ಮಾಡಲು ಪ್ರಯತ್ನಿಸಿದರು. ಪ್ರಾಥಮಿಕ ಶಿಕ್ಷಣ ಶ್ರೇಷ್ಠ ಮಟ್ಟದ ಗುಣಾತ್ಮಕ ಶಿಕ್ಷಣ ಎಲ್ಲರಿಗೂ ದೊರೆಯುವಂತೆ ಕಾರ್ಯಕ್ರಮ ರೂಪಿಸಲು ಯತ್ನಿಸಿದ್ದರು. ಅಲ್ಲದೆ ಸಾರ್ವಜನಿಕ ಸ್ಥಳಗಳಲ್ಲಿ ಸಮಾನ ಪ್ರವೇಶಕ್ಕೆ ಅವಕಾಶ ನೀಡಬೇಕು. ಜೊತೆಗೆ ಅಂಧ ಆಚರಣೆಗಳನ್ನು ಬಿಟ್ಟು ಪರಸ್ಪರ ಗೌರವವನ್ನು ಸೂಚಿಸಿದಾಗ ಸಮಾಜ ಬದಲಾಗುವುದರ ಮೂಲಕ ಸಮಾಜದ ಜನರೆಲ್ಲ ಗೌರವಯುತ ಉದಾತ್ತ ಜೀವನ ನಡೆಸಲು ಸಾಧ್ಯ ಎಂಬುವುದು

ಗೋಪಾಲಗೌಡರ ಆಶಯವಾಗಿತ್ತು.

ಗೋಪಾಲಗೌಡರ ಜೀವನ ಮತ್ತು ಹೋರಾಟ, ಸಮಾಜವಾದಿ ತತ್ವದ ಬಗ್ಗೆ ಇದ್ದ ನಿಷ್ಠೆ ದೀನದಲಿತರ ಬಗೆಗಿನ ಅನುಕಂಪ ಇವನ್ನೆಲ್ಲ ನೋಡಿದಾಗ ಇವರೊಬ್ಬ ಶ್ರೇಷ್ಠ ಮಾನವತಾವಾದಿಯಾಗಿದ್ದರು ಎನ್ನುವುದು ಸ್ಪಷ್ಟವಾಗಿದೆ. ಇವರ ಸಮಾಜವಾದಿ ತತ್ವನಿಷ್ಠೆ ಕರ್ನಾಟಕದ ಮಲೆನಾಡಿನ ಭಾಗದಲ್ಲಿ ಸಮಾಜವಾದ ಎಂದ ತಕ್ಷಣ ಗೋಪಾಲಗೌಡರನ್ನು ನೆನಪಿಸಿಕೊಳ್ಳದ ಸಂದರ್ಭಗಳು ತುಂಬಾ ವಿರಳ. ಗೋಪಾಲಗೌಡರು ಸಮಾಜದ ಸಾಂಸ್ಕೃತಿಕ ಬದುಕಿನ ಬದಲಾವಣೆಯನ್ನು ಕುರಿತು ಚರ್ಚಿಸುವಾಗ, ಹೋರಾಡುವಾಗ ನಿಷ್ಕಲ್ಮಶ, ಪ್ರಾಮಾಣಿಕ ಮನಸ್ಸಿನಿಂದ ಕಾರ್ಯನಿತರಾಗಿರುತ್ತಿದ್ದರು. ಸ್ವಾರ್ಥವಾಗಲಿ, ದ್ವೇಷವಾಗಲಿ ಅವರ ಕಾರ್ಯಕ್ಕೆ ಎಂದೂ ಅಡ್ಡ ಬರಲಿಲ್ಲ. ಅವರ ಸಂಪೂರ್ಣ ಬದುಕನ್ನು ಸಮಾಜವಾದಿ ತತ್ವವನ್ನಾಧರಿಸಿದ ಜನತಾ ಸೇವೆಗಾಗಿಯೇ ಮುಡುಪಾಗಿಟ್ಟಿದ್ದರು.

ಸಮಾಜದಲ್ಲಿ ನಡೆಯುವ ಯಾವುದೇ ಅನ್ಯಾಯ, ದಬ್ಬಾಳಿಕೆಯ ವಿರುದ್ಧ ಕ್ರಾಂತಿಕಾರಕವಾಗಿ ಹೋರಾಡುತ್ತಿದ್ದ ಗೋಪಾಲಗೌಡರು ಕಾಗೋಡು ಸತ್ಯಾಗ್ರಹ, ಗೋವಾ ವಿಮೋಚನೆ, ಮಂಡ್ಯ ಮತ್ತು ಧಾರವಾಡಗಳಲ್ಲಿ ನಡೆದ ರೈತ ಹೋರಾಟಗಳಲ್ಲಿ ಮುಂಚೂಣಿಯಲ್ಲಿದ್ದು, ಹೋರಾಟದ ಯಶಸ್ಸಿಗೆ ಕಾರಣಕರ್ತರಾಗಿದ್ದಾರೆ. ಹೀಗೆ ದೀನದಲಿತರ, ಶೋಷಿತರ, ಅನ್ಯಾಯಕ್ಕೊಳಗಾದವರ ಪರವಾದ ಯಾವುದೇ ಹೋರಾಟಗಳಲ್ಲಿ ಭಾಗವಹಿಸಿ ಅವರ ರಕ್ಷಣೆಗೆ ಮುಂದಾಗುವುದರ ಮೂಲಕ ತಮ್ಮ ಮಾನವೀಯ ಮೌಲ್ಯವನ್ನು ಎತ್ತಿ ಹಿಡಿದಿದ್ದಾರೆ. ಸರಳತೆ, ಸಜ್ಜನಿಕೆ ಶುಭ್ರತೆಯನ್ನು ತಮ್ಮ ನಿತ್ಯ ಜೀವನದಲ್ಲಿ ಉಳಿಸಕೊಂಡು ಬಂದ ನಿರಾಡಂಬರದ ಅಪೂರ್ವ ಆದರ್ಶ ವ್ಯಕ್ತಿಯಾಗಿ ಕಾಣುತ್ತಾರೆ. ''ರಾಜಕಾರಣಿಗಳಲ್ಲಿ ಸತ್ಯ ಮತ್ತು ಸತ್ವ ಗುಣಗಳು ಕಡಿಮೆ. ಆದರೆ ಗೋಪಾಲ ಆ ಎರಡು ಗುಣಗಳಿಂದಲೂ ಪ್ರಬುದ್ಧ ರಾಜಕಾರಣಿಯಾಗಿ ಪ್ರಜ್ವಲಿಸುತ್ತಿದ್ದ '' ಎಂಬ ಕಾಳಿಂಗರಾವ್ ಇವರ ಮಾತನ್ನು ಕೇಳಿದಾಗ ಗೋಪಾಲಗೌಡರು ಎಂತಹ ಪ್ರಾಮಾಣಿಕ ಸತ್ವಮಯ ಪ್ರಬುದ್ಧ ರಾಜಕಾರಣಿಯಾಗಿದ್ದರೆಂಬುದು ತಿಳಿದುಬರುತ್ತದೆ.

ಇಂದಿನ ಸರ್ಕಾರ ಮತ್ತು ರಾಜಕೀಯ ನಾಯಕರುಗಳು ಬಡವರ ಶೋಷಿತರ ಹೆಸರಿನಲ್ಲಿ ದೊಡ್ಡ - ದೊಡ್ಡ ಯೋಜನೆ - ಕಾರ್ಯಕ್ರಮಗಳನ್ನು ರೂಪಿಸುತ್ತಾರೆ. ಆದರೆ ಆ ಕಾರ್ಯಕ್ರಮಗಳನ್ನು ಪ್ರಾಮಾಣಿಕವಾಗಿ ಕಾರ್ಯಗತ ಮಾಡದೆ ಅದರ ಪ್ರಯೋಜನವನ್ನು ಯಾರ್‍ಯಾರೋ ಪಡೆದುಕೊಳ್ಳುವ ಪರಿಸ್ಥಿತಿ ನಿರ್ಮಾಣವಾಗಿದೆ. ಬಡವರಿಗೆ ಕೇವಲ ಅವು ಘೋಷಣೆಗಳಾಗಿ ಕಂಡುಬರುತ್ತವೆ. ಅನ್ಯಾಯಕ್ಕೊಳಗಾದವರ ತುಟಿಗೆ ತುಪ್ಪ ಸವರುವ ಕೆಲಸ ಮಾತ್ರ ನಡೆಯುತ್ತಿದ್ದು ರಾಜಕಾರಣ ಎಂದರೆ ಅಸಹ್ಯಪಟ್ಟುಕೊಳ್ಳುವ ಹೇಸಿಗೆ ಎನಿಸುವ, ಭಯಾನಕ ಎಂದೆನಿಸುವ ಮಟ್ಟವನ್ನು ತಲುಪಿದೆ. ಆದ್ದರಿಂದ ಇಂತಹ ಸಂದರ್ಭದಲ್ಲಿ ಗೋಪಾಲಗೌಡರಂತಹ ಸಜ್ಜನ ನಾಯಕರ ಅಗತ್ಯವಿದೆ ಎಂದೆನಿಸುತ್ತದೆ. ಇಂದಿನ ರಾಜಕಾರಣದ ಸಂದರ್ಭದಲ್ಲಿ ಗೋಪಾಲಗೌಡರ ತತ್ವನಿಷ್ಠೆ , ಪ್ರಾಮಾಣಿಕ ಬದುಕನ್ನು ಊಹೆ ಮಾಡಿಕೊಳ್ಳುವುದು ಕಷ್ಟವಾಗಬಹುದು. ಕಾರಣ ಇಂದು ನಾಯಕರಾಗುವುದು, ಅಧಿಕಾರ ಗಳಿಸುವುದೆಲ್ಲವೂ ತಮ್ಮ ಸ್ವಾರ್ಥಕ್ಕಾಗಿಯೇ ವಿನಾ ಜನರ ಸೇವೆಗಾಗಿ ಅಲ್ಲ, ತಮ್ಮ ಅಧಿಕಾರವನ್ನು, ಜನಪ್ರಿಯತೆಯನ್ನು, ಸಂಪತ್ತನ್ನು ಹೆಚ್ಚಿಸಿಕೊಳ್ಳುವುದೇ ಇಂದಿನ ರಾಜಕಾರಣಿಗಳ ಮುಖ್ಯ ಗುರಿಯಾಗಿದೆ. ಇಂತಹ ಸಂದರ್ಭದಲ್ಲಿ ಗೋಪಾಲಗೌಡರ ತತ್ವ -ನಿಷ್ಠೆ , ಪ್ರಾಮಾಣಿಕ ಸಮಾಜವಾದಿ ರಾಜಕಾರಣ ಅಗತ್ಯವೆಂದೆನಿಸುತ್ತದೆ.

ಶ್ರೇಷ್ಠ ಸಮಾಜವಾದಿ ನಾಯಕರಾಗಿ ರಾಷ್ಟ್ರ -ಅಂತಾರಾಷ್ಟ್ರೀಯ ಮಟ್ಟದಲ್ಲಿ ಒಬ್ಬ ಅಪರೂಪದ ಆದರ್ಶ ಸಮಾಜವಾದಿ ಎಂದು ಕರೆಸಿಕೊಂಡ ಗೋಪಾಲಗೌಡರು ದೀರ್ಘ ಕಾಲ ಬದುಕದೆ ಅಕಾಲ ಮೃತ್ಯು ಹೊಂದಿರುವುದು ಸಮಾಜವಾದಕ್ಕೆ, ಈ ರಾಜ್ಯದ ಜನತೆಗೆ ಆದ ನಷ್ಟವೆಂದೆನಿಸುತ್ತದೆ. ಕಾರಣ ಒಬ್ಬ ರಾಜಕೀಯ ನಾಯಕನಾಗಿ ಆಸ್ತಿ, ಸಂಪತ್ತು , ಹಣವನ್ನು ಗಳಿಸದೆ ಬರಿಗೈನಲ್ಲಿ ಜೀವಿಸಿದ ಉದಾಹರಣೆಗಳು ಪ್ರಪಂಚದಲ್ಲಿ ಎಲ್ಲಿಯೂ ಸಿಗಲಿಕ್ಕಿಲ್ಲ. ಆದ್ದರಿಂದ ಇಂದಿನ ಕಲುಷಿತ, ಆತಂಕಕಾರಿ ರಾಜಕಾರಣ ಸಂದರ್ಭದಲ್ಲಿ ಗೋಪಾಲಗೌಡರಂತಹ ಸಮಾಜವಾದಿ ತತ್ವನಿಷ್ಠರಾದ ನಾಯಕರುಗಳು ಹೆಚ್ಚು ಹೆಚ್ಚು ಹುಟ್ಟಿ ಬರಬೇಕಾಗಿದೆ. ಜೊತೆಗೆ ಇಂದು ಸಾಮಾನ್ಯ ಜನತೆಗೆ ಎದುರಾದ ಉದಾರೀಕರಣ, ಖಾಸಗೀಕರಣ, ಜಾಗತೀಕರಣದಿಂದ ಉಂಟಾದ ಆತಂಕಕಾರಿ ಪರಿಸ್ಥಿತಿಯನ್ನೆದುರಿಸಲು ಗೋಪಾಲಗೌಡರು ಕಂಡುಕೊಂಡಂತಹ ಒಂದು ಗಟ್ಟಿಯಾದ ಸಮಾಜವಾದಿ ಸಿದ್ಧಾಂತದ ಅವಶ್ಯಕತೆ ಇದೆ ಎಂಬುದು ನನ್ನ ಅಭಿಪ್ರಾಯವಾಗಿದೆ.

ನಾನು ಈ ಸಂಪ್ರಬಂಧದಲ್ಲಿ ಗೋಪಾಲಗೌಡರ ಸಮಾಜವಾದಿ ತತ್ವ -ನಿಷ್ಠೆ ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಗೋಪಾಲಗೌಡರ ಪ್ರಾಮಾಣಿಕ ಬದುಕಿನ ಚಿತ್ರಣವನ್ನು ನೀಡುವ ಪ್ರಯತ್ನ ಮಾಡಿದ್ದೇನೆ. ಅವರು ಸಮಾಜವಾದಿ ಚಿಂತನೆಗೆ ಹೇಗೆ ಆಕರ್ಷಿತರಾದರು ಮತ್ತು ನಮ್ಮ ಸಾಮಾಜಿಕ ವ್ಯವಸ್ಥೆಗೆ ಸರಿಹೊಂದುವ ತತ್ವವನ್ನು ಹೇಗೆ ರೂಪಿಸಿಕೊಂಡು ಅದನ್ನು ಕಾರ್ಯರೂಪಕ್ಕೆ ತಂದರೆಂಬುದನ್ನು ತಿಳಿಸುವ ಪ್ರಯತ್ನ ಮಾಡಿದ್ದೇನೆ. ಹಾಗೆಯೇ ತಮ್ಮ ನಿತ್ಯ ಬದುಕಿನಲ್ಲಿ ಹಾಗೂ ಒಬ್ಬ ರಾಜಕಾರಣಿಯಾಗಿ ಯಾವ ಯಾವ ಹೋರಾಟಗಳನ್ನು ಮಾಡಿದರು. ಈ ಎಲ್ಲಾ ಹೋರಾಟಗಳಲ್ಲಿ ತಮ್ಮ ಸಮಾಜವಾದಿ ತತ್ವವನ್ನು ಹೇಗೆ ನಿಷ್ಠೆಯಿಂದ ಅನುಸರಿಸಿದರು, ಜೊತೆಗೆ ತಮ್ಮ ಬದುಕನ್ನೇ ಶೋಷಿತರ, ಬಡವರ ಏಳಿಗೆಗೆ ಮೀಸಲಿಟ್ಟು ನಿಸ್ವಾರ್ಥವಾಗಿ ಹೇಗೆ ಬದುಕಿದರು ಎಂಬುದನ್ನು ತಿಳಿಸುವುದರ ಮೂಲಕ ಇಂದಿನ ರಾಜಕಾರಣಿಗಳಿಗೆ ಒಬ್ಬ ಸಜ್ಜನ, ಪ್ರಾಮಾಣಿಕ, ಆದರ್ಶ ರಾಜಕಾರಣಿಯನ್ನು ಪರಿಚಯಿಸಿದ್ದೇನೆ. ಈ ಮೂಲಕ ನಮ್ಮ ಯುವ ರಾಜಕಾರಣಿಗಳಿಗೆ ಶ್ರೇಷ್ಠ ರಾಜಕಾರಣದ ಮಾದರಿಯೊಂದನ್ನು ತೋರಿದ್ದೇನೆಂದು ಭಾವಿಸುತ್ತೇನೆ.

# ಆಕರ ಗ್ರಂಥಗಳು


1. ಸಂಪಾದಕ — 1981 — ಜೀವಂತ ಜ್ವಾಲೆ,
   ಕೋಣಂದೂರು ವೆಂಕಪ್ಪ ಗೌಡ — ಯಶಸ್ವೀ ಪ್ರಕಾಶನ,
   (ಶಾಂತವೇರಿ ಗೋಪಾಲಗೌಡ ಸ್ಮಾರಕ ಗ್ರಂಥ) — ಹನುಮಂತ ನಗರ,
   ಬೆಂಗಳೂರು - 560019

2. ಸಂಪಾದಕರು — 1992 — ಶಾಂತವೇರಿ ಗೋಪಾಲಗೌಡರ,
   ಡಾ. ಕಾಳೇಗೌಡ ನಾಗವಾರ — ನೆನಪಿನ ಸಂಪುಟ,
   ಜಿ.ವಿ. ಅನಂತಮೂರ್ತಿ — ಪ್ರಸಾರಾಂಗ, ಕನ್ನಡ ವಿ.ವಿ.,ಹಂಪಿ,
   ವಿದ್ಯಾರಣ್ಯ - 583221

3. ಸಂಪಾದಕರು — 1999 — ಗೋಪಾಲಗೌಡ ಶಾಂತವೇರಿ,
   ಡಾ. ಹೆಚ್.ಸಿ. ವಿಷ್ಣುಮೂರ್ತಿ — ಅಂತರಂಗ - ಬಹಿರಂಗ,
   ಅನನ್ಯ ಪ್ರಕಾಶನ, 'ಹೊಮನೆ ',
   ಶ್ರೀದೇವಿ ನಗರ, ವಿದ್ಯಾಗಿರಿ,
   ಧಾರವಾಡ - 580004

# ಪರಾಮರ್ಶನ ಗ್ರಂಥಗಳು :


| | | | |
|---|---|---|---|
| 1. | ಲೇಖಕರು<br>ಡಾ. ಹೆಚ್.ಸಿ. ವಿಷ್ಣುಮೂರ್ತಿ | 1982 | 'ಗೋಪಾಲಗೌಡ ಶಾಂತವೇರಿ'<br>ಅನನ್ಯ ಪ್ರಕಾಶನ,ನಜರಾಬಾದ, ಮೈಸೂರು -10 |
| 2. | ಲೇಖಕರು<br>ಯು.ಆರ್. ಅನಂತಮೂರ್ತಿ | 1978 | 'ಅವಸ್ಥೆ '<br>ಅಕ್ಷರ ಪ್ರಕಾಶನ, ಸಾಗರ,ಕರ್ನಾಟಕ - 577401 |
| 3. | ಸಂಪಾದಕರು<br>ಡಾ. ಹೆಚ್.ಸಿ. ವಿಷ್ಣುಮೂರ್ತಿ | 1982 | 'ಗೋಪಾಲಗೌಡರ ಡೈರಿ, ಪತ್ರಗಳು ಇತ್ಯಾದಿ'<br>ಭಾಗ -1, ಅಕ್ಷರ ಪ್ರಕಾಶನ, ನಜರಾಬಾದ<br>ಮೈಸೂರು -10 |
| 4. | ಲೇಖಕರು<br>V.D. Mahajan | 1988 | 'Political Theory'<br>Published by S. Chand & Company (pot)Ltd., Ram nagar New Delhi -110055 |
| 5. | ಸಂಪಾದಕರು<br>ಕೌಲಾನಿ ಧರ್ಮಯ್ಯ | 2002 | 'ನಾಮದಾರಿ ತೀರ್ಥಹಳ್ಳಿ ತಾಲ್ಲೂಕು ಒಕ್ಕಲಿಗರ ಸಂಘದ ಶತಮಾನೋತ್ಸವ ಸಂಸ್ಮರಣ ಗ್ರಂಥ 1901-2001'<br>ಪ್ರಕಾಶಕರು : ತೀರ್ಥಹಳ್ಳಿ<br>ತಾಲ್ಲೂಕು ಒಕ್ಕಲಿಗರ ಸಂಘ, ಆಜಾದ್ ರಸ್ತೆ,<br>ತೀರ್ಥಹಳ್ಳಿ-577432, ಶಿವಮೊಗ್ಗ ಜಿಲ್ಲೆ |
| 6. | ಲೇಖಕರು<br>ಹೆಚ್.ಟಿ. ರಾಮಕೃಷ್ಣ | 1994 | 'ರಾಜಕೀಯ ಸಿದ್ಧಾಂತ ಮತ್ತು ಚಿಂತಕರು'<br>ಲಲಿತ ಪ್ರಕಾಶನ, ಹೆಬ್ಬಾಳ ರಸ್ತೆ<br>ಲೋಕನಾಯಕ ನಗರ, ಮೈಸೂರು - 570016 |
| 7. | ಲೇಖಕರು<br>ಡಾ. ಅಂಬಳಿಕೆ ಹಿರಿಯಣ್ಣ | 1999 | 'ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ '<br>ಕನ್ನಡ ಪುಸ್ತಕ ಪ್ರಾಧಿಕಾರ, ಪಂಚ ಮಹಾಕವಿ ರಸ್ತೆ<br>ಚಾಮರಾಜಪೇಟೆ, ಬೆಂಗಳೂರು - 560018 |

## ಸಂದರ್ಶಿಸಿದ ಮಹನೀಯರುಗಳು

1. ಶ್ರೀ ಶೇಷಪ್ಪ ಹೆಗಡೆ, ಮೇಗರವಳ್ಳಿ.
2. ಶ್ರೀ ವೆಂಕಟರಮಣ ಗೌಡರು, ಕಾಳಮ್ಮನಗುಡಿ.
3. ಶ್ರೀ ಪಟಮಕ್ಕಿ ರತ್ನಾಕರ್, ಮಾಜಿ ಶಾಸಕರು, ತೀರ್ಥಹಳ್ಳಿ ಕ್ಷೇತ್ರ.
4. ಶ್ರೀ ಶ್ರೀನಿವಾಸ ಗೌಡ, ಬೆಳ್ಳಿಕೊಪ್ಪ

